CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೨೩, ೨೦೦೪ (ಪುಷ್ಯ ೨, ಶಕ ವರ್ಷ ೧೯೨೬) | ಸಂಚಿಕೆ ೫೧ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪೊಲೀಸ್ ಇಲಾಖೆ**

**ಪರಿಶಿಷ್ಟ ಜಾತಿ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆ ಪಟ್ಟಿ**

**ಸಂಖ್ಯೆ: ಪ್ರಕಸಿ(2) 12/ನೇಮಕಾತಿ/ 2002-03**

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪರಿಶಿಷ್ಟ ಜಾತಿ ಪಂಗಡಕ್ಕೆ ಮೀಸಲಾದ ಬ್ಯಾಕ್‌ಲಾಗ್ ಹುದ್ದೆಯನ್ನು ಭರ್ತಿ ಮಾಡುವ ಕುರಿತು.

ಪೊಲೀಸ್ ಇಲಾಖೆಯಲ್ಲಿ ಈ ಕೆಳಗೆ ನಮೂದಿಸಿರುವ ಗ್ರೂಪ್ ಸಿ ವೃಂದದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅರ್ಹ ಪರಿಶಿಷ್ಟಜಾತಿ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳ ಆಯ್ಕೆಯನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 13/ಎಸ್ ಬಿಸಿ 2001 ದಿನಾಂಕ: 21.11.2001ರ ಪ್ರಕಾರ ಮಾಡಲಾಗಿದ್ದು, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ದಿನಾಂಕ: 01.06.2002ರ ಅನ್ವಯ ಈ ಕೆಳಗಿನಂತೆ ಪ್ರಕಟಗೊಳಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | ಆಯ್ಕೆಗೊಂಡ ಅಭ್ಯರ್ಥಿ ಹೆಸರು ಮತ್ತು ಪಡೆದ ಅಂಕಗಳು | ಶೇಕಡ | ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿ ಹೆಸರು ಮತ್ತು ಪಡೆದ ಅಂಕಗಳು | ಶೇಕಡ |
|---|---|---|---|---|---|---|---|
| 1. | ಶೀಘ್ರಲಿಪಿಗಾರ | 1 | ಪರಿಶಿಷ್ಟಜಾತಿ | ಚನ್ನಬಸಯ್ಯ ಕಬಾಡೆ ತಂದೆ ವೀರಭದ್ರ ಕಬಾಡೆ, ಅರ್ಜಿ ಸಂಖ್ಯೆ:3 | 72.88 | ಮೋಹನ್ ಬಿ.ಆರ್. ತಂದೆ ರಾಮಪ್ಪ ಅರ್ಜಿಸಂಖ್ಯೆ:5548 | 68.44 |

**ಸೂಚನೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 13/ ಎಸ್‌ಬಿಸಿ 2001 ದಿನಾಂಕ: 21.11.01ರ ಪ್ರಕಾರ ಆಯ್ಕೆಯಲ್ಲಿ 29 ರಿಂದ 40 ವಯಸ್ಸಿನಲ್ಲಿನ ಅಭ್ಯರ್ಥಿಗಳಿಗೆ ಮೊದಲ ಆದ್ಯತೆಯನ್ನು ಅಭ್ಯರ್ಥಿಗಳು ಗಳಿಸಿರುವ ಅಂಕಗಳ ಆಧಾರದ ಮೇಲೆ ಈ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

2) ಆಯ್ಕೆ ಮಾಡಿದ ಅಭ್ಯರ್ಥಿಗಳ ಜೊತೆಗೆ ಹೆಚ್ಚುವರಿ ಪಟ್ಟಿಯನ್ನು ಸಹ ಸೂಚಿಸಲಾಗಿದೆ.

ಆಯ್ಕೆ ಪ್ರಾಧಿಕಾರ ಮತ್ತು ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್
ಆಫ್ ಪೊಲೀಸ್ (ಕೇಂದ್ರ ಸ್ಥಾನ-1).

ಪಿ.ಆರ್. 1694

**ನಿರ್ದೇಶಕರ ಕಛೇರಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ನಂ.47, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು-560001**

**ಸುತ್ತೋಲೆ**

**ಸಂಖ್ಯೆ: ಗಭೂಇ/ ಸಿಬ್ಬಂದಿಅ-1/ ಇತರೆ/ 1971, 2004-05, ಬೆಂಗಳೂರು, ದಿನಾಂಕ: 25ನೇ ನವೆಂಬರ್, 2004**

ಸರ್ಕಾರಿ ಅಧಿಸೂಚನೆಯ ಸಂಖ್ಯೆ: ಡಿಪಿಎಆರ್ 607 ಎಸ್‌ಎಎಸ್ 2004 ದಿನಾಂಕ: 26.10.2004 ಮತ್ತು ಇದೇ ಸಮ ಸಂಖ್ಯೆಯ ತಿದ್ದೋಲೆಯ ದಿನಾಂಕ: 28.10.2004ರ ಅನುಸಾರ ನಾನು ಗಣಿ ಮತ್ತು ಭೂ ವೈಜ್ಞಾನಿಕ ಸಂಪನ್ಮೂಲಗಳ ಅಭಿವೃದ್ಧಿ ಆಯುಕ್ತರಾಗಿ ಮತ್ತು ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಾಗಿ ಅಧಿಕಾರವನ್ನು ದಿನಾಂಕ: 30.10.2004ರ ಅಪರಾಹ್ನ ವಹಿಸಿಕೊಂಡಿರುತ್ತೇನೆ.

ನನ್ನ ವೈಯಕ್ತಿಕ ಗಮನವನ್ನು ಸೆಳೆಯ ಬಯಸುವ ವಿಷಯಗಳ ಬಗ್ಗೆ ಅರೆ ಸರ್ಕಾರಿ ಪತ್ರಗಳನ್ನು ಮತ್ತು ಗೌಪ್ಯ ವಿಷಯಗಳನ್ನು ಕುರಿತಂತೆ ಪತ್ರಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿಕೊಡಲು ಕೋರುತ್ತೇನೆ.

ಶ್ರೀ ಯೋಗೇಂದ್ರ ತ್ರಿಪಾಠಿ, ಭಾ.ಆ.ಸೇ.

ಗಣಿ ಮತ್ತು ಭೂವೈಜ್ಞಾನಿಕ ಸಂಪನ್ಮೂಲಗಳ ಆಯುಕ್ತರು ಮತ್ತು

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರು,
ಗಣಿ ಮತ್ತು ಭೂವಿಜ್ಞಾನ ಇಲಾಖೆ,
ನಂ.49, ಖನಿಜ ಭವನ, ರೇಸ್‌ಕೋರ್ಸ್ ರಸ್ತೆ,
ಬೆಂಗಳೂರು-560001.
ದೂರವಾಣಿ:080-22269632-ಕಛೇರಿ,
080-25719451-ನಿವಾಸ,
ಫ್ಯಾಕ್ಸ್ ನಂ.-080-2226933.

**ಯೋಗೇಂದ್ರ ತ್ರಿಪಾಠಿ**
ಗಣಿ ಮತ್ತು ಭೂವೈಜ್ಞಾನಿಕ ಸಂಪನ್ಮೂಲಗಳ
ಆಯುಕ್ತರು ಮತ್ತು ಗಣಿ ಮತ್ತು ಭೂವಿಜ್ಞಾನ
ಇಲಾಖೆಯ ನಿರ್ದೇಶಕರು.

ಪಿ.ಆರ್. 1695

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 19/ ಡಿಟಿಸಿಆರ್/ 2004-2005, ದಿನಾಂಕ: 26ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ನಂ.2, ಇಐಬಿ, ಮಂಗಳೂರು ವಿಭಾಗ,
ಮಂಗಳೂರು.

**ವಿರುದ್ಧ**

**ಆರೋಪಿಗಳು**

1. ನಾಗರಾಜ (40 ವರ್ಷ)
ಬಿನ್ ತಿಮ್ಮೇಗೌಡ, ಡೋಬಿ ಘಾಟ್,
ಸಂತೆ ಮುಗನ ಹಳ್ಳಿ ಗ್ರಾಮ, ಚೆನ್ನಪಟ್ಟಣ ತಾಲ್ಲೂಕು.
ಬಸವನ ಗುಡಿ ಅಂಚೆ, ಬೆಂಗಳೂರು.
2. ಮನೆಯ ಮಾಲೀಕ- ಎಂ. ಇದಿನಬ್ಬ,
ಬಿನ್ ಹಾಜಿಕ ಅಹಮ್ಮದ್, ದಿಂಡತೋಟ ಮನೆ
ಶ್ರೀನಿವಾಸ ನಗರ ಅಂಚೆ.
3. ರವೀಂದ್ರ ಮಲ್ಯ,
ಡೋರ್‌ನಂ.17-176, ಲೋವರ್ ಕಾರ್‌ಸ್ಟ್ರೀಟ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 08.07.2004 ರಂದು ಅಬಕಾರಿ ನಿರೀಕ್ಷಕರು, ನಂ.2 ಅಬಕಾರಿ ಗುಪ್ತವಾರ್ತಾದಳ ಮಂಗಳೂರು ವಿಭಾಗ, ಮಂಗಳೂರುರವರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಸುರತ್ಕಲ್‌ನ ಮುಕ್ಕದಲ್ಲಿ ರಸ್ತೆಗಸ್ತು ತಿರುಗುತ್ತಿರುವಾಗ ಮುಕ್ಕಾದಿಂದ ಚೆಲ್ಲಾರುಗೆ ಹೋಗುವ ರಸ್ತೆಯ ಎಡಭಾಗದ ದಿಂಡತೋಟ ಮನೆಯ ಪಕ್ಕದ ಕಟ್ಟಡದಲ್ಲಿ ಅಕ್ರಮವಾಗಿ ಸಾರಾಯಿ ತಯಾರಿಸುವ ಘಟಕವಿದೆ ಎಂಬ ಖಚಿತ ವರ್ತಮಾನದ ಮೇರೆಗೆ ಸದ್ರಿ ಸ್ಥಳಕ್ಕೆ ಹೋಗಿ ಪರಿಶೀಲಿಸಿದಾದ ಸದರಿ ಕಟ್ಟಡದ ಬಾಗಿಲು ತೆರೆದಿದ್ದು, ಅದರಲ್ಲಿ ಒಬ್ಬ ವ್ಯಕ್ತಿಯು ನೈಲಾನ್ ಚೀಲಗಳಿಗೆ ಸಾರಾಯಿ ಸ್ಯಾಚೆಟ್‌ಗಳನ್ನು ತುಂಬಿಸಿರುವುದು ಕಂಡು ಬಂತು. ನಂತರ ಸದರಿ ಕಟ್ಟಡವನ್ನು ಶೋಧಿಸಲು ತೀರ್ಮಾನಿಸಿ ಸಾಕ್ಷಿಗಾಗಿ ಸ್ಥಳೀಯರು ಯಾರು ಸಿಗದ ಕಾರಣ ಇಲಾಖಾ ಸಿಬ್ಬಂದಿಯವರನ್ನೆ ಸಾಕ್ಷಿದಾರರನ್ನಾಗಿ ಇರಿಸಿಕೊಂಡು ಸದರಿ ಕಟ್ಟಡದ ಶೋಧನೆ ಬಗ್ಗೆ ನ್ಯಾಯಾಲಯದ ವಾರೆಂಟ್ ಪಡೆದುಕೊಳ್ಳಲು ಸಮಯಾವಕಾಶ ಇಲ್ಲದ ಕಾರಣ, ಸರ್ಚ್ ಮೆಮೊವನ್ನು ತಯಾರಿಸಿ ಕಟ್ಟಡದ ಒಳಗೆ ಪ್ರವೇಶ ಮಾಡಿ ನೋಡಲಾಗಿದ್ದು, ಕಟ್ಟಡದ ಒಳ ಪ್ರದೇಶ ದ್ವಾರದ ಎರಡನೇಯ ಕೊಠಡಿಯ ಎಡಭಾಗದಲ್ಲಿ ಸಾರಾಯಿ ಸ್ಯಾಚೆಟ್ ತಯಾರಿಸುವ ಯಂತ್ರವನ್ನು ಅಳವಡಿಸಿರುವುದು ಕಂಡು ಬಂತು. ಸದರಿ ಕೊಠಡಿಯು 15 ಅಡಿ ಉದ್ದ ಹಾಗೂ 25 ಅಡಿ ಅಗಲವಿದ್ದು, ಕಟ್ಟಡದ ಪ್ರವೇಶ ದ್ವಾರವು ಪಶ್ಚಿಮ ದಿಕ್ಕಿಗೆ ಮುಖ ಮಾಡಿರುತ್ತದೆ. ಸದರಿ ಕೊಠಡಿಯ ಬಲಭಾಗದಲ್ಲಿ 35 ಲೀಟರು ಗಾತ್ರದ ಬಿಳಿ ಬಣ್ಣದ 10 ಪ್ಲಾಸ್ಟಿಕ್ ಕ್ಯಾನಿನಲ್ಲಿ ಸುಮಾರು 350 ಲೀಟರು ಮದ್ಯಸಾರ ನೈಲಾನ್ ಗೋಣಿಚೀಲಗಳಲ್ಲಿ ಒಟ್ಟು 100 ಎಂಎಲ್‌ನ 5000 ಸಾರಾಯಿ ತೊಟ್ಟೆಗಳಿರುವುದು ಹಾಗೂ ಪಕ್ಕದಲ್ಲಿಯೇ 35 ಲೀಟರು ಗಾತ್ರದ 24 ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳಿರುತ್ತದೆ. ಸಾರಾಯಿ ತೊಟ್ಟೆ ತಯಾರಿಕಾ ಯಂತ್ರದ ಬಳಿ ಸಾರಾಯಿ ತೊಟ್ಟೆ ತಯಾರಿಸಲು ಉಪಯೋಗಿಸುವ 4 ಫಿಲ್ಮ್ ರೋಲ್‌ಗಳು ಇದ್ದು, ಸದ್ರಿ ಯಂತ್ರಕ್ಕೆ ಫಿಲ್ಮ್ ರೋಲ್‌ಗಳನ್ನು ಅಳವಡಿಸಲಾಗಿದ್ದು ಅದರ ಮೇಲೆ 35 ಯು.ಪಿ. ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ್ದು ಮೈಶುಗರ್ ಸಾರಾಯಿ ಸಂಸ್ಕರಣಾ ಘಟಕ, ಹಾಸನ ಎಂದು ನಮೂದಿಸಲಾಗಿರುತ್ತದೆ. ಯಂತ್ರಕ್ಕೆ ವಿದ್ಯುಚ್ಛಕ್ತಿ ವಯರನ್ನು ಅಳವಡಿಸಲಾಗಿದ್ದು, ಸಿಂಟೆಕ್ಸ್ ಟ್ಯಾಂಕ್ ಯಂತ್ರಕ್ಕೆ ಪ್ಲಾಸ್ಟಿಕ್ ಪೈಪನ್ನು ಜೋಡಿಸಲಾಗಿದ್ದು ಹಾಗೂ ವಿದ್ಯುತ್ ಚಾಲಿತ ಮೋಟಾರ್ ಯಂತ್ರವನ್ನು ಸಹ ಜೋಡಿಸಿರುತ್ತಾರೆ.

ಸದರಿ ಯಂತ್ರದ ಪಕ್ಕದಲ್ಲಿ 100 ಎಂಎಲ್‌ನ 10 ಸಾರಾಯಿ ತೊಟ್ಟೆಗಳು ಇದ್ದು ಅದರ ಪಕ್ಕದಲ್ಲಿಯೇ 200 ಲೀಟರು ಗಾತ್ರದ ಫೈಬರ್ ಡ್ರಂ ಇದಕ್ಕೆ ನೀರು ಸರಬರಾಜು ಮಾಡುವ ಪೈಪನ್ನು ಅಳವಡಿಸಲಾಗಿತ್ತು. ಯಂತ್ರದ ಮೇಲ್ಭಾಗದಲ್ಲಿ ಸುಮಾರು 225 ಲೀಟರು ಗಾತ್ರದ ಸಿಂಟೆಕ್ಸ್ ಡ್ರಮ್ ಇದ್ದು ಇದರಲ್ಲಿ ಸುಮಾರು 35 ಲೀಟರು ಬಲ್ಕ್ ಸಾರಾಯಿ ಇರುವುದು ಕಂಡು ಬಂತು. ಸಿಂಟೆಕ್ಸ್ ಡ್ರಮ್‌ನಿಂದ ಯಂತ್ರದ ಮೇಲೆ ಇರುವ ಸ್ಟೀಲ್ ಡ್ರಮ್‌ಗೆ ಸಾರಾಯಿ ಸುರಿಯಲು ಒಳಗೆ ಪೈಪನ್ನು ಅಳವಡಿಸಲಾಗಿದೆ. ಆದುದರಿಂದ ಇದು ಒಂದು ಅಕ್ರಮ ನಕಲಿ ಸಾರಾಯಿ ಘಟಕವೆಂದು ಆರೋಪಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತನ್ನ ಹೆಸರು ನಾಗರಾಜ್ ಬಿನ್ ತಿಮ್ಮೇಗೌಡ, ಬಸವನ ಗುಡಿ ಅಂಚೆ, ಚೆನ್ನಪಟ್ಟಣ, ಬೆಂಗಳೂರು ಎಂದು ತಿಳಿಸಿರುತ್ತಾನೆ. ಸದರಿ ಕಟ್ಟಡದ ಮುಂಭಾಗದಲ್ಲಿ ನಿಂತುಕೊಂಡಿರುವ ವಾಹನ ನಂ.ಕೆಎ-21-5743ನ್ನು ಶೋಧಿಸಲಾಗಿ ಇದರಲ್ಲಿ 100 ಎಂಎಲ್‌ನ 500 ಸಾರಾಯಿ ತೊಟ್ಟೆಗಳಂತೆ ಒಟ್ಟು 7500 ಸಾರಾಯಿ ತೊಟ್ಟೆಗಳು ಇರುವುದು ಕಂಡು ಬಂತು. ಸದರಿ ವಾಹನದ ಬಳಿ ಚಾಲಕ ಅಥವಾ ಕ್ಲೀನರ್ ಇರುವುದು ಕಂಡು ಬರಲಿಲ್ಲ. ಸದರಿ ವಾಹನದ ಕ್ಯಾಬೀನ್‌ನಲ್ಲಿ ವಾಹನಕ್ಕೆ ಸಂಬಂಧಿಸಿದ ಯಾವುದೇ ದಾಖಲಾತಿಗಳನ್ನು ಪರಿಶೀಲಿಸಿದಾಗ ಯಾವುದೇ ದಾಖಲೆಗಳು ದೊರೆತಿರುವುದಿಲ್ಲ. ಆರೋಪಿಯಲ್ಲಿ ವಿಚಾರಿಸಿದಾಗ ಸಮರ್ಪಕವಾದ ಉತ್ತರವನ್ನು ನೀಡಿರುವುದಿಲ್ಲ.

ಆರೋಪಿಯು ವಾಹನ ಸಂಖ್ಯೆ: ಕೆಎ-21-5743ರಲ್ಲಿ ತುಂಬಿಸಿರುವ ಸಾರಾಯಿ ತೊಟ್ಟೆಗಳನ್ನು ಮತ್ತು ಕಟ್ಟಡದಲ್ಲಿ ಅಕ್ರಮವಾಗಿ ತಯಾರಿಸಲಾಗಿರುವ ಸಾರಾಯಿ ತೊಟ್ಟೆಗಳಿಂದ ತೆಗೆದುಕೊಂಡು ತುಂಬಿಸಿರುವುದು ನಿಜವಾಗಿದೆ ಎಂದು ತಿಳಿಸಿರುತ್ತಾನೆ. ವಶಪಡಿಸಿಕೊಂಡ ಮದ್ಯಸಾರದಿಂದ ಒಂದು ಸಾರಾಯಿ ತೊಟ್ಟೆಗಳಿಂದ ಬಲ್ಕ್ ಸಾರಾಯಿಯಿಂದ ರಾಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲ್‌ಗಳನ್ನು ತೆಗೆದು ಇಲಾಖಾ ಸೀಲಿನಿಂದ ಸೀಲ್ ಮಾಡಿ, ಮಾದರಿ ಸೀಲನ್ನು ತಯಾರಿಸಿ ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ಇದು ಅಕ್ರಮವಾಗಿ ನಕಲಿ ಸಾರಾಯಿ ತೊಟ್ಟೆಗಳನ್ನು ತಯಾರಿಸಿ ಸಾಗಾಣಿಕೆ ಮಾಡುತ್ತಿರುವುದು ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ ಪ್ರಕಾರ ಅಪರಾಧವಾಗಿದೆ ಎಂದು ಆರೋಪಿಗೆ ತಿಳಿಸಿ, ಸದರಿ ಸ್ಥಳದಲ್ಲಿ ದೊರೆತ ಅಕ್ರಮ ಸೊತ್ತುಗಳನ್ನು ಮತ್ತು ವಾಹನವನ್ನು ವಶಪಡಿಸಿಕೊಂಡು, ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 1/04-05 ದಿನಾಂಕ: 08.07.04ರಂದು ಮೊಕದ್ದಮೆ ದಾಖಲಿಸಿ ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಮೊಕದ್ದಮೆಯಲ್ಲಿ ಜಪ್ತಿ ಮಾಡಲ್ಪಟ್ಟ ಈ ಕೆಳಗಿನ ಸೊತ್ತುಗಳ ಮಾಲಿಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಇದುವರೆಗೆ ಯಾರು ಅರ್ಜಿಯನ್ನು ಸಲ್ಲಿಸದಿರುವ ಕಾರಣ ಕಲಂ 43 (ಸಿ) ರ ಅನ್ವಯ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 26.10.2004ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

**ವಶಪಡಿಸಿಕೊಂಡ ಸೊತ್ತುಗಳು**

1. ವಿದ್ಯುತ್ ಚಾಲಿತ ಸಾರಾಯಿ ಸ್ಯಾಚೆಟ್ ತಯಾರಿಸುವ ಮೋಟಾರು ಸಹಿತ ಯಂತ್ರ-1
2. 35 ಲೀಟರು ಗಾತ್ರದ ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ 350 ಲೀಟರು ಮದ್ಯಸಾರ.
3. 12.500 ಸಾರಾಯಿ ತೊಟ್ಟೆಗಳು.
4. 35 ಲೀಟರು ಗಾತ್ರದ ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳು-24
5. ಫಿಲ್ಮ್ ರೋಲ್‌ಗಳು-4.
6. ಯಂತ್ರಕ್ಕೆ ತಯಾರಿಸಿ ಉಳಿದ ಫಿಲ್ಮ್ ರೋಲ್-1
7. 225 ಲೀಟರು ಗಾತ್ರದ ಸಿಂಟೆಕ್ಸ್ ಡ್ರಂ.
8. 200 ಲೀಟರು ಗಾತ್ರದ ನೀಲಿ ಬಣ್ಣದ ಫೈಬರ್ ಡ್ರಂ.
9. ವಿದ್ಯುತ್ ಚಾಲಿತ ಸಣ್ಣ ಮೋಟಾರು ಯಂತ್ರ.
10. 100 ಎಂಎಲ್‌ನ 10 ಸಾರಾಯಿ ತೊಟ್ಟೆಗಳು.
11. ಸ್ಟೀಲ್ ಡ್ರಂ-1.

ಅಬಕಾರಿ ಉಪ ಅಧೀಕ್ಷಕರು, ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ:1/04-05 ದಿನಾಂಕ: 10.09.2004 ರಂದು ಸಲ್ಲಿಸಿದ್ದು, ವಶಪಡಿಸಿಕೊಂಡ ಸ್ವರಾಜ್ ಮಜ್ದಾ ಮಿನಿ ಲಾರಿ ಸಂಖ್ಯೆ: ಕೆಎ-21-5743ರ ಬಗ್ಗೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪುತ್ತೂರುರವರು ಸಲ್ಲಿಸಿದ "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಆಧರಿಸಿ ವಾಹನ ಮಾಲೀಕರಾದ ಶ್ರೀ ಎ. ರಜಾಕ್, ಬಿನ್: ಉಸ್ಮಾನ್ ಅಬ್ಬಾಸ್ ಹಾಜಿ, ಅರೆಬೈಲ್ ಹೌಸ್, ಮದವು ಪೋಸ್ಟ್, ಪುತ್ತೂರುರವರಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 (ಬಿ)ರಂತೆ ದಿನಾಂಕ: 26.10.2004ರಂದು ಕಾರಣ ಕೇಳಿ ನೋಟಿಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿರುತ್ತದೆ.

ಶ್ರೀ ಎ. ರಜಾಕ್, ಬಿನ್: ಉಸ್ಮಾನ್ ಅಬ್ಬಾಸ್ ಹಾಜಿ, ಅರೆಬೈಲ್ ಹೌಸ್, ಮದವು ಪೋಸ್ಟ್, ಪುತ್ತೂರುರವರು ಈ ಪ್ರಾಧಿಕಾರದಿಂದ ನೀಡಿದ ಕಾರಣ ಕೇಳಿ ನೋಟಿಸಿಗೆ ದಿನಾಂಕ: 05.11.2004ರಂದು ಈ ರೀತಿ ಉತ್ತರವನ್ನು ನೀಡಿರುತ್ತಾರೆ. ಸದರಿ ಸ್ವರಾಜ್ ಮಜ್ದಾ ಮಿನಿ ಲಾರಿಯನ್ನು ತಾನು ಶ್ರೀ ಅಶ್ರಫ್ ಬಿನ್: ಕೆ. ಮಹಮ್ಮದ್, ತಲಪಾಡಿ ಮನೆ, ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕುರವರಿಗೆ ಮಾರಾಟ ಮಾಡಿರುತ್ತೇನೆ. ಹಾಗೂ ಈ ಸಂಬಂಧ ಮಂಗಳೂರು ಆರ್.ಟಿ.ಓ ಕಛೇರಿಯಿಂದ ಸಿ.ಸಿ.ಯನ್ನು ತೆಗೆದುಕೊಂಡಿರುತ್ತಾರೆ. ಹಾಗೂ ಸದರಿಯವರು ಸಿ.ಸಿ.ಯಂತೆ ವಾಹನದ ರಿಕಾರ್ಡುಗಳನ್ನು ಖರೀದಿ ಮಾಡಿಕೊಳ್ಳುವುದು ಖರೀದಿದಾರರ ಕರ್ತವ್ಯವಾಗಿರುತ್ತದೆ. ಆದುದರಿಂದ ಮೇಲ್ಕಂಡ ಪ್ರಕರಣಕ್ಕೂ ತನಗೂ ಯಾವುದೇ ರೀತಿಯ ಸಂಬಂಧವಿಲ್ಲ ಎಂದು ತಮ್ಮ ಅರ್ಜಿಯಲ್ಲಿ ತಿಳಿಸಿರುತ್ತಾರೆ. ಸದರಿ ಅರ್ಜಿ, ದಾಖಲಾತಿಗಳು ಮತ್ತು "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಪರಿಶೀಲಿಸಿದಾಗ ವಾಹನ ನೊಂದಣಿ ಮಾಲೀಕ ರಜಾಕ್‌ರವರೇ ಆಗಿರುತ್ತಾರೆ. ರಜಾಕ್‌ರವರು ತಮ್ಮ ಅರ್ಜಿಯಲ್ಲಿ ಸದರಿ ವಾಹನವನ್ನು ಶ್ರೀ ಅಶ್ರಫ್‌ರವರಿಗೆ ವರ್ಗಾವಣೆ ಮಾಡಿರುತ್ತೇನೆ ಎಂದು ತಿಳಿಸಿರುತ್ತಾರೆ. ಆದರೆ "ಬಿ" ಅಬ್‌ಸ್ಟ್ರಾಕ್ಟ್ ವರದಿಯಲ್ಲಿ ವರ್ಗಾವಣೆ ಆದ ಬಗ್ಗೆ ಯಾವುದೇ ಮಾಹಿತಿ ನೀಡಿರುವುದಿಲ್ಲ. ಸದರಿ ವಾಹನವನ್ನು ಶ್ರೀ ಅಶ್ರಫ್‌ರವರಿಗೆ ಮಾರಾಟ ಮಾಡಿದ್ದರೂ ವರ್ಗಾವಣೆ ಮಾಡಿಕೊಂಡಿಲ್ಲ. ಆದುದರಿಂದ "ಬಿ" ಅಬ್‌ಸ್ಟ್ರಾಕ್ಟ್ ವರದಿ ಪ್ರಕಾರ ಸದ್ರಿ ನೊಂದಣಿ ಮಾಲಿಕ ಶ್ರೀ ರಜಾಕ್‌ರವರೇ ಆಗಿರುತ್ತಾರೆ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಸಾರಾಯಿಯನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಆದರೆ ಪ್ರಕರಣವು ದಾಖಲಾಗಿ 4 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 08.07.2004ರಂದು ಸದರಿ ಮಿನಿ ಲಾರಿಯಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಾಣಿಕೆ ಮಾಡುತ್ತಿದ್ದುದನ್ನು ಮತ್ತು ಅಕ್ರಮವಾಗಿ ಮದ್ಯಸಾರವನ್ನು ಹೊಂದಿ ನಕಲಿ ಸಾರಾಯಿಯನ್ನು ತಯಾರಿಸಿ ಸಾಗಾಣಿಕೆ ಮಾಡುತ್ತಿರುವುದನ್ನು ಅಬಕಾರಿ ನಿರೀಕ್ಷಕರು, ನಂ.2 ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರು ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಸಾರಾಯಿ, ಮದ್ಯಸಾರ ಮತ್ತು ಅಕ್ರಮ ಸೊತ್ತುಗಳನ್ನು ಹೊಂದಿ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿ ಪಡಿಸಿರುತ್ತಾರೆ. ಜಪ್ತ ಪಡಿಸಿದ ದ್ರವ್ಯವು

ಮದ್ಯಸಾರ ಹಾಗೂ ಸಾರಾಯಿಯು ನಕಲಿ ಸಾರಾಯಿಯೆಂದು ದೃಢಪಟ್ಟಿರುತ್ತದೆ. ಈ ಮೇಲಿನ ಹಿನ್ನೆಲೆಯಲ್ಲಿ ಆರೋಪಿಯು ಕಾನೂನುಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಮತ್ತು ಅಕ್ರಮ ಸಾರಾಯಿ ತೊಟ್ಟೆಗಳನ್ನು ತಯಾರಿಸುತ್ತಿರುವುದು ಮತ್ತು ಅಕ್ರಮ ಸಾರಾಯಿ ಸಾಗಾಣಿಕೆಗೆ ವಾಹನ ಸಂಖ್ಯೆ: ಕೆಎ-21-5743ನ್ನು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಶ್ರೀ ಎ. ರಜಾಕ್‌ರವರಿಂದ ಶ್ರೀ ಅಶ್ರಫ್‌ರವರು ವಾಹನವನ್ನು ಪಡೆದು ವರ್ಗಾವಣೆಯನ್ನು ಮಾಡದೇ ಅಕ್ರಮವಾಗಿ ನಕಲಿ ಸಾರಾಯಿಯನ್ನು ತಯಾರಿಸಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಸದರಿ ಪ್ರಕರಣದಲ್ಲಿ ವಾಹನ ಮತ್ತು ಅಕ್ರಮ ಸೊತ್ತುಗಳನ್ನು ವಶಪಡಿಸಿಕೊಂಡು ಸುಮಾರು 4 ತಿಂಗಳು ಕಳೆದಿದ್ದರೂ ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತು ಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನದ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ, ನಂತರ ಕಲಂ 43(ಸಿ) ರನ್ವಯ ಅಬಕಾರಿ ನಿರೀಕ್ಷಕರು, ನಂ.2, ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 1/04-05 ದಿನಾಂಕ: 08.07.2004 ರಂದು ವಶಪಡಿಸಿಕೊಂಡಿರುವ ವಾಹನ ಮಿನಿ ಲಾರಿ ಸಂಖ್ಯೆ: ಕೆಎ-21-5743ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 26.11.2004ರಂದು ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1696

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 292/ ಡಿಟಿಸಿಆರ್/ 2003-2004, ದಿನಾಂಕ: 30ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು,
ಬಂಟ್ವಾಳ ಗ್ರಾಮಾಂತರ ಪೊಲೀಸ್ ಠಾಣೆ,
ಬಂಟ್ವಾಳ.

**ವಿರುದ್ಧ**

**ಆರೋಪಿಗಳು**

1. ಶ್ರೀನಾಥ್,
2. ಹಮೀದ್, ಬಿನ್ ಇಬ್ರಾಹಿಂ ಬ್ಯಾರಿ, ವಾಸ: ದಾಸರಗುಡ್ಡೆ ಮನೆ, ಸಜೀಪ, ಮೂನ್ನೂರು ಗ್ರಾಮ, ಬಂಟ್ವಾಳ.
3. ಯೂಸೆಫ್, ಬಿನ್ ಅಹಮ್ಮದ್, ವಾಸ: ಪೊನ್ನೊಟ್ಟು ಅಲ್ಸಫಾ ಮಂಜಿಲ್, ಬಂಟ್ವಾಳ, ಮೂಡಗ್ರಾಮ, ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕು.
4. ಪ್ರವೀಣ್, ಬಿನ್ ಬಾಲಕೃಷ್ಣ ವಾಸ: ಪೊನ್ನೊಡಿ ಮನೆ, ಬಂಟ್ವಾಳ, ಮೂಡಗ್ರಾಮ, ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕು.
5. ಪ್ರಸಾದ್, ಬಿನ್ ಬಾಲಕೃಷ್ಣ, ಪೊನ್ನೊಡಿ ಮನೆ, ಬಂಟ್ವಾಳ, ಮೂಡಗ್ರಾಮ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 21.04.2004ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಬಂಟ್ವಾಳ ತಾಲ್ಲೂಕು ಸಜೀಪ ಮೂಡಗ್ರಾಮದ ಕೊಳಕೆ ಬೈಲು ರಸ್ತೆಯ ಸರ್ಕಾರಿ ಗುಡ್ಡೆ ಪ್ರದೇಶದಲ್ಲಿ ಅಕ್ರಮವಾಗಿ ಸಾರಾಯಿ ತಯಾರಿಕಾ ಘಟಕವನ್ನು ಪತ್ತೆ ಹಚ್ಚುವ ಸಲುವಾಗಿ ಬೆಳಗ್ಗಿನ ಜಾವ 4.00 ಗಂಟೆಗೆ ದಾಳಿ ನಡೆಸಿದಾಗ ಆರೋಪಿಗಳಾದ ಶ್ರೀನಾಥ್ ಮತ್ತು ನಾಲ್ವರು ಸೇರಿಕೊಂಡು ಸ್ಯಾಚೆಟ್ ಮಿಶನನ್ನು ಇಟ್ಟುಕೊಂಡು ಸಾರಾಯಿ ತೊಟ್ಟೆಗಳನ್ನು ತಯಾರಿಸುತ್ತಿರುವುದನ್ನು ಪೊಲೀಸು ಉಪ ನಿರೀಕ್ಷಕರು ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ಕೂಡಿಕೊಂಡು ಆರೋಪಿಗಳನ್ನು ಹಿಡಿಯಲು ಪ್ರಯತ್ನಿಸಿದಾಗ ಶ್ರೀನಾಥ್ ಎಂಬಾತನು ಓಡಿ ಪರಾರಿಯಾದನು. ಉಳಿದ ನಾಲ್ಕು ಮಂದಿಯವರನ್ನು ಸಿಬ್ಬಂದಿಯವರ ಸಹಾಯದಿಂದ ಹಿಡಿದು ವಿಚಾರಿಸಿದಾಗ ಅಕ್ರಮವಾಗಿ ಸಾರಾಯಿ ತೊಟ್ಟೆಗಳನ್ನು ತಯಾರಿಸಿ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ. ಆರೋಪಿಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ಪರಾರಿಯಾದವನ (1) ಶ್ರೀನಾಥ್ ಮತ್ತು (2) ಹಮೀದ್ ಬಿನ್: ಇಬ್ರಾಹಿಂ ಬ್ಯಾರಿ, ವಾಸ: ದಾಸರಗುಡ್ಡೆ ಮನೆ, ಸಜೀಪ ಮೂನ್ನೂರು ಗ್ರಾಮ, ಬಂಟ್ವಾಳ (3) ಯೂಸೆಫ್ ಬಿನ್ ಅಹಮ್ಮದ್, ವಾಸ: ಪೊನ್ನೊಟ್ಟು ಅಲ್ಸಫಾ ಮಂಜಿಲ್, ಬಂಟ್ವಾಳ, ಮೂಡಗ್ರಾಮ. ಬಿ.ಸಿ. ರೋಡ್, ಬಂಟ್ವಾಳ ತಾಲ್ಲೂಕು (4) ಪ್ರವೀಣ್, ಬಿನ್: ಬಾಲಕೃಷ್ಣ ವಾಸ: ಪೊನ್ನೊಡಿ ಮನೆ, ಬಂಟ್ವಾಳ ಮೂಡಗ್ರಾಮ, ಬಿ.ಸಿ.

ರೋಡ್, ಬಂಟ್ವಾಳ ತಾಲ್ಲೂಕು (5) ಪ್ರಸಾದ್ ಬಿನ್ ಬಾಲಕೃಷ್ಣ, ಪೊನ್ನೊಡಿ ಮನೆ, ಬಂಟ್ವಾಳ ಮೂಡಗ್ರಾಮ, ಬಂಟ್ವಾಳ ತಾಲ್ಲೂಕು ಎಂಬುದಾಗಿ ತಿಳಿಸಿರುತ್ತಾರೆ. ಸ್ಥಳದಲ್ಲಿ ಅಕ್ರಮ ಸಾರಾಯಿ ತೊಟ್ಟೆ ತಯಾರಿಕೆಗೆ ಹಾಗೂ ಸಾಗಾಣಿಕೆಗೆ ಉಪಯೋಗಿಸಿದ ವಾಹನದ ವಿವರ ಈ ಕೆಳಗಿನಂತಿರುತ್ತದೆ.

**ವಶಪಡಿಸಿಕೊಂಡ ಸೊತ್ತುಗಳು**

1. ನಕಲಿ ಸಾರಾಯಿ ತೊಟ್ಟೆ ತಯಾರಿಸುವ ಸ್ಯಾಚೆಟ್ ಯಂತ್ರ-1
2. ಸ್ಪಿರಿಟ್ ತುಂಬಿದ 35 ಲೀಟರಿನ ಬಿಳಿ ಪ್ಲಾಸ್ಟಿಕ್ ಕ್ಯಾನುಗಳು-10
3. ಸಾರಾಯಿ ತುಂಬಿದ 35 ಲೀಟರಿನ ಬಿಳಿ ಪ್ಲಾಸ್ಟಿಕ್ ಕ್ಯಾನುಗಳು-6
4. 100 ಮಿಲಿಯ ಸಾರಾಯಿ ತುಂಬಿದ ಸಾರಾಯಿ ಸ್ಯಾಚೆಟ್‌ಗಳು-6000
5. 35 ಲೀಟರಿನ ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು-15
6. 1/2 ಹೆಚ್.ಪಿ. ಯ ಪಂಪು ಸೆಟ್ಟು ಮತ್ತು ಪೈಪು-1
7. ಸ್ವಿಚ್ ಬೋರ್ಡ್-1
8. ಪ್ಲಾಸ್ಟಿಕ್ ಡ್ರಂ-1
9. ಅಂಬಾಸಿಡರ್ ಕಾರು ಸಂಖ್ಯೆ: ಕೆಎ-21-2851.
10. ಹೀರೋಹೊಂಡಾ ಸ್ಪ್ಲೆಂಡರ್ ಮೋಟಾರು ಸೈಕಲ್ ಸಂಖ್ಯೆ: ಕೆಎ-19ಎಲ್-3128.

ಸದರಿ ಸೊತ್ತುಗಳಲ್ಲಿ ಕ್ರ.ಸಂ. 2ರಲ್ಲಿರುವ ಸ್ಪಿರಿಟ್ ಕ್ಯಾನ್‌ಗಳಿಂದ ಮತ್ತು ಕ್ರ.ಸಂ. 3 ಮತ್ತು 4ರಲ್ಲಿರುವ ಲೂಸ್ ಸಾರಾಯಿ ಮತ್ತು ಸಾರಾಯಿ ತೊಟ್ಟೆಗಳಿಂದ ರಾಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲ್‌ಗಳನ್ನು ತೆಗೆದು ಇದಕ್ಕೆ ಎಸ್.ಹೆಚ್.ಓ. ಸೀಲು ಮಾಡಿರುತ್ತಾರೆ. ಇದೊಂದು ಅಕ್ರಮ ಸಾರಾಯಿ ತೊಟ್ಟೆ ತಯಾರಿಕಾ ಘಟಕವಾಗಿದ್ದು ಸದರಿ ಮದ್ಯಸಾರದಿಂದ ಸಾರಾಯಿ ಸ್ಯಾಚೆಟ್ ಯಂತ್ರದಿಂದ ಸಾರಾಯಿ ತೊಟ್ಟೆಗಳನ್ನು ತಯಾರಿಸಿ ಅಕ್ರಮವಾಗಿ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುತ್ತಿರುವುದು ಖಚಿತವಾಗಿರುವುದರಿಂದ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 45/2004 ದಿನಾಂಕ:21.04.2004ರಂದು ದಾಖಲಿಸಿರುತ್ತಾರೆ. ಮಹಜರನ್ನು ಸ್ಥಳದಲ್ಲಿಯೇ ಬರೆದು, ಆರೋಪಿಗಳನ್ನು ಸ್ಥಳದಲ್ಲಿಯೂ ದಸ್ತಗಿರಿ ಮಾಡಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೂ ವರದಿ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದ ಆದೇಶದ ಮೇರೆಗೆ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಅವುಗಳ ಸಂಪೂರ್ಣ ದಾಖಲಾತಿಗಳೊಂದಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು ಬಂಟ್ವಾಳರವರಿಗೆ ಹಸ್ತಾಂತರಿಸಿರುತ್ತಾರೆ.

ಹಸ್ತಾಂತರ ಪಡೆದ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರು ತಮ್ಮ ತನಿಖಾ ವರದಿ ಸಂಖ್ಯೆ: ಇಎಕ್ಸ್‌ಇ: ಬಿಎನ್‌ಟಿ: ಆರ್‌ಸಿಆರ್: 37:2003-04 ದಿನಾಂಕ: 21.07.2004ರಲ್ಲಿ ವಶಪಡಿಸಿಕೊಂಡ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 26.10.2004ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ಸಂಖ್ಯೆ: ಕೆಎ-21-2851 ಮತ್ತು ಹಿರೋಹೊಂಡ ಸ್ಪ್ಲೆಂಡರ್ ಸಂಖ್ಯೆ: ಕೆಎ-19-ಎಲ್-3128 ನ್ನು ಹೊರತುಪಡಿಸಿ ಉಳಿದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿದೆ. ಸೊತ್ತುಗಳಲ್ಲಿ ಮದ್ಯಸಾರವನ್ನು ಸಾರಾಯಿ ಸಂಸ್ಕರಣಾ ಘಟಕಕ್ಕೆ ರಹದಾರಿ ಮೂಲಕ ಹಸ್ತಾಂತರಿಸಲು ಹಾಗೂ ಸಾರಾಯಿ ತೊಟ್ಟೆಗಳನ್ನು ಮತ್ತು ಬಲ್ಕ್ ಸಾರಾಯಿಯ ತೀಕ್ಷ್ಣತೆ ಕಡಿಮೆಯಾಗಿರುವುದರಿಂದ ಇದು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ರಾಸಾಯನಿಕ ತಜ್ಞರು ತಮ್ಮ ವರದಿಯಲ್ಲಿ ದೃಢೀಕರಿಸಿರುವುದರಿಂದ ನಾಶಪಡಿಸಲು ಹಾಗೂ ಉಳಿದ ಸೊತ್ತುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರು ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಿ ವಶಪಡಿಸಿಕೊಂಡ ಹಿರೋಹೊಂಡ ಸ್ಪೆಂಡರ್ ಸಂಖ್ಯೆ: ಕೆಎ-19-ಎಲ್-3128 ರ "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸಾರಿಗೆ ಅಧಿಕಾರಿಗಳು ಮಂಗಳೂರುರವರು ಸಲ್ಲಿಸಿದ "ಬಿ" ಅಬ್‌ಸ್ಟ್ರಾಕ್ಟ್ ವರದಿಯಲ್ಲಿ ವಾಹನದ ನೊಂದಣಿ ಮಾಲೀಕ ಶ್ರೀ ಸುಪ್ರೀತ್ ಆಳ್ವ, ಬಿನ್ ಸತೀಶ್ ಆಳ್ವ 14-265, ಪಾಂಬೋಡಿ ಹೌಸ್ ಬಿ.ಸಿ. ರೋಡ್ ಜೋಡು ಮಾರ್ಗ, ಬಂಟ್ವಾಳ ಎಂದು ತಿಳಿಸಿರುತ್ತಾರೆ. ವಶಪಡಿಸಿಕೊಂಡ ಹಿರೋಹೊಂಡಾ ಸ್ಪ್ಲೆಂಡರ್ ಸಂಖ್ಯೆ: ಕೆಎ-19-ಎಲ್-3128 ಆರ್.ಸಿ. ಮಾಲೀಕರಾದ ಶ್ರೀ ಸುಪ್ರೀತ್ ಆಳ್ವರವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 26.10.2004ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 43 (ಬಿ) ರಂತೆ ಕಾರಣ ಕೇಳಿ ನೋಟಿಸನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ಸ್ವೀಕೃತಿಯಾಗದೇ ಈ ಪ್ರಾಧಿಕಾರಕ್ಕೆ ದಿನಾಂಕ: 12.11.2004ರಂದು ಹಿಂದೆ ಬಂದಿರುತ್ತದೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಮೇಲಿನ ಪುರಾವೆಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಹಿರೋಹೊಂಡ ಸಂಖ್ಯೆ: ಕೆಎ-19-ಎಲ್-3128 ಮತ್ತು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಮದ್ಯಸಾರ ಮತ್ತು ಬಲ್ಕ್ ಸಾರಾಯಿಗಳಲ್ಲಿ ರಾಸಾಯನಿಕ ತಜ್ಞರ ಪ್ರಕಾರ ಮದ್ಯಸಾರ ಹಾಗೂ ನಕಲಿ ಸಾರಾಯಿಯೆಂದು ದೃಢಪಟ್ಟಿರುತ್ತದೆ. ಮತ್ತು ಆರೋಪಿಯು ಕಾನೂನು ಬಾಹಿರ ಕೃತ್ಯವನ್ನೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿದ್ದು ಮತ್ತು ಅಕ್ರಮ ಸಾರಾಯಿ ತೊಟ್ಟೆಗಳು ಹಿರೋಹೊಂಡಾ ಸ್ಪ್ಲೆಂಡರ್‌ನಲ್ಲಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸದರಿ ಪ್ರಕರಣದಲ್ಲಿ ವಾಹನ ಮತ್ತು ಸೊತ್ತುಗಳನ್ನು ಜಪ್ತುಪಡಿಸಿ 7 ತಿಂಗಳು ಕಳೆದಿದ್ದರೂ ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತಿಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ವಶಪಡಿಸಿಕೊಂಡು ಸುಮಾರು 7

ತಿಂಗಳು ಕಳೆದಿದ್ದರೂ ಇದು ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಿರೋಹೊಂಡಾ ಸ್ಪ್ಲೆಂಡರ್ ಸಂಖ್ಯೆ: ಕೆಎ-19-ಎಲ್-3128ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸು ಉಪ ನಿರೀಕ್ಷಕರು, ಬಂಟ್ವಾಳ ಗ್ರಾಮಾಂತರ ಪೊಲೀಸು ಠಾಣೆ, ಬಂಟ್ವಾಳ ಇವರ ಮೊಕದ್ದಮೆ ಸಂಖ್ಯೆ: 45/2004 ದಿನಾಂಕ: 21.04.2004ರಲ್ಲಿ ವಶಪಡಿಸಿಕೊಂಡ ವಾಹನ ಹಿರೋ ಹೊಂಡಾ ಸ್ಪ್ಲೆಂಡರ್ ಮೋಟಾರು ಬೈಕ್ ಸಂಖ್ಯೆ: ಕೆಎ-19-ಎಲ್-3128ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 30.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1697

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 379/ ಡಿಟಿಸಿಆರ್/ 2002-2003, ದಿನಾಂಕ: 26ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆರೋಪಿಗಳು**

ಅಬಕಾರಿ ನಿರೀಕ್ಷಕರು,
ನಂ.2, ಅಬಕಾರಿ ಗುಪ್ತವಾರ್ತಾದಳ,
ಮಂಗಳೂರು ವಿಭಾಗ, ಮಂಗಳೂರು.

ಆರೋಪಿಗಳು ಪರಾರಿಯಾಗಿರುತ್ತಾರೆ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.12.2002 ರಂದು ಮಧ್ಯಾಹ್ನ 12.45 ಗಂಟೆ ಸಮಯಕ್ಕೆ ಪುತ್ತೂರು ತಾಲ್ಲೂಕು ಶಿರಾಡಿ ಗ್ರಾಮದ ರಾಷ್ಟ್ರೀಯ ಹೆದ್ದಾರಿ 48ರ ಗುರಕಹಳ್ಳ ಸೇತುವೆಯ ಹತ್ತಿರ ಫಿರ್ಯಾದುದಾರರು ತಮ್ಮ ಸಿಬ್ಬಂದಿಯವರೊಂದಿಗೆ ರಸ್ತೆಗಾವಲು ನಡೆಸಿ ಶಂಕಿತ ವಾಹನವನ್ನು ತಪಾಸಣೆ ಮಾಡುತ್ತಿರುವಾಗ, ಗುರಕಹಳ್ಳ ಸೇತುವೆಯ ಹತ್ತಿರ ಒಂದು ಲಾರಿ ಸರಕು ಹೇರಿಕೊಂಡು ನಿಂತಿದ್ದು ಸಂಶಯದ ಮೇರೆಗೆ ಸದರಿ ಲಾರಿಯ ಹತ್ತಿರ ಹೋಗಿ ಪರಿಶೀಲಿಸಿದಾಗ, ಲಾರಿಯ ಒಳಗಿನಿಂದ ಮದ್ಯದ ಘಾಟು ವಾಸನೆ ಬರುತ್ತಿತ್ತು. ಅನುಮಾನದ ಮೇರೆಗೆ ಸದರಿ ಲಾರಿಯ ಶೋಧನೆ ಬಗ್ಗೆ ತೀರ್ಮಾನಿಸಿ ಲಾರಿಯ ಹತ್ತಿರ ಯಾರೂ ಅದರ ವಾರಸುದಾರರು ದೊರಕದ ಪ್ರಯುಕ್ತ ನಂತರ ಸಾಕ್ಷಿಗಾಗಿ ಪ್ರಯತ್ನಿಸಲಾಗಿ ಬೇರೆ ಯಾರೂ ದೊರೆಯದ ಕಾರಣ ಇಲಾಖಾ ಸಿಬ್ಬಂದಿಯವರನ್ನು ಸಾಕ್ಷಿಯನ್ನಾಗಿರಿಸಿಕೊಂಡು ಲಾರಿಯ ಶೋಧನೆ ಬಗ್ಗೆ ನ್ಯಾಯಾಲಯದ ವಾರಂಟ್ ಪಡೆದುಕೊಳ್ಳಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ನಂತರ ಸಿಬ್ಬಂದಿಯವರನ್ನೇ ಸಾಕ್ಷಿದಾರರನ್ನಾಗಿರಿಸಿ, ಅವರ ಸಮಕ್ಷಮ ಸದರಿ ಲಾರಿಯನ್ನು ಪರಿಶೀಲಿಸಿದಾಗ ಅದರಲ್ಲಿದ್ದ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಈ ಕೆಳಗಿನಂತಿರುತ್ತದೆ.

**ಮದ್ಯದ ವಿವರ**

| ಕ್ರ. ಸಂ. | ಮದ್ಯದ ಹೆಸರು | 750 ಎಂ.ಎಲ್. | 375 ಎಂ.ಎಲ್. | 180 ಎಂ.ಎಲ್. | ಪೆಟ್ಟಿಗೆ |
|---|---|---|---|---|---|
| 1. | ರಾಯಲ್ ಚಾಲೆಂಜ್ ವಿಸ್ಕಿ | 300 | - | - | 25 |
| 2. | ಡೈರೆಕ್ಟರ್ ಸ್ಪೆಷಲ್ ವಿಸ್ಕಿ | 720 | - | 1920 | 100 |
| 3. | ಡೈರೆಕ್ಟರ್ ಸ್ಪೆಷಲ್ ಬ್ಲಾಕ್ ವಿಸ್ಕಿ | 1500 | 240 | 2160 | 180 |
| 4. | ಓಲ್ಡ್ ಮಾಂಕ್ ರಮ್ | 480 | 552 | 1536 | 95 |
| | | | | **ಒಟ್ಟು** | **400** |

ಸದರಿ ಲಾರಿಯಲ್ಲಿ ಒಟ್ಟು 400 ಪೆಟ್ಟಿಗೆ ಮದ್ಯಗಳಲ್ಲಿ ಒಟ್ಟು 3557.880 ಲೀಟರ್ ಮದ್ಯ ಕಂಡು ಬಂದಿದ್ದು, ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂ.ಎಲ್. ನ 5.375 ಎಂ.ಎಲ್.ನ 2 ಮತ್ತು 180 ಎಂ.ಎಲ್. ನ 3 ಸೀಸೆಗಳನ್ನು ತೆಗೆದು ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಮಾದರಿ ಸೀಲನ್ನು ತಯಾರಿಸಿ ಸೀಸೆಗಳ ಮೇಲೆ ಅಂಟಿಸಿರುತ್ತಾರೆ. ಸದರಿ ಲಾರಿಯನ್ನು ಪರಿಶೀಲಿಸಿದಾಗ ಇದರ ನೋಂದಣಿ ಸಂಖ್ಯೆ: ಎಂವೈಟಿ-6506 ಆಗಿದ್ದು, ಇದರ ಇಂಜಿನ್ ಸಂಖ್ಯೆ: ಟಿವೈಪಿ 692 ಡಿಐ 2 ನಂ. ಐ 33450 ಮತ್ತು ಚಾಸೀಸ್ ಸಂಖ್ಯೆ: 344052126452 ಆಗಿರುತ್ತದೆ. ಸದರಿ ಲಾರಿಯನ್ನು ಕೂಲಂಕಷವಾಗಿ ಪರಿಶೀಲಿಸಿದಾಗ, ಲಾರಿಗೆ ಸಂಬಂಧಪಟ್ಟ ಯಾವುದೇ ದಾಖಲೆ ಪತ್ರಗಳು ಹಾಗೂ ಮದ್ಯಕ್ಕೆ ಸಂಬಂಧಪಟ್ಟ ರಹದಾರಿ ಪತ್ರಗಳು ದೊರೆತಿರುವುದಿಲ್ಲ. ಈ ರೀತಿಯಾಗಿ ರಹದಾರಿ ಪತ್ರಗಳಿಲ್ಲದೆ ಮದ್ಯವನ್ನು ಹೊಂದಿ ಸಾಗಾಟ ಮಾಡುವುದು ಕರ್ನಾಟಕ ರಾಜ್ಯ ಅಬಕಾರಿ ಕಾಯಿದೆ ಉಲ್ಲಂಘನೆಯಾಗಿದ್ದು, ಅಕ್ರಮ ಮದ್ಯ ಮತ್ತು ಸಾಗಾಣಿಕೆಗೆ ಬಳಸಿದ್ದ ಲಾರಿಯನ್ನು ಇಲಾಖಾ ವಶಕ್ಕೆ ವಶಪಡಿಸಿಕೊಂಡು ಯಾದಾಸ್ತನ್ನು ಸ್ಥಳದಲ್ಲಿಯೇ ಬರೆದು ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 23/02-03 ದಿನಾಂಕ: 27.12.02ರಂದು ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ಪತ್ರ ಸಂಖ್ಯೆ: 38/2002-03 ದಿನಾಂಕ:07.01.2003 ರಂದು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರ ಪ್ರಮಾಣ ಪತ್ರ ಸಂಖ್ಯೆ: ೭ 1912-10 ದಿನಾಂಕ: 06.01.03ರಲ್ಲಿ ಮದ್ಯದ ಮದ್ಯಸಾರ ಪ್ರಮಾಣ ತಲಾ 42.80 ಇದ್ದು 25 ಡಿಗ್ರಿ ಯು.ಪಿ. ಪತ್ತೆಯಾಗಿದ್ದು, ಇದು ಮಾನವ ಸೇವನೆಗೆ ಯೋಗ್ಯವಾಗಿದೆ ಎಂದು ದೃಢೀಕರಣ ಪತ್ರ ನೀಡಿರುವ ಮೇರೆಗೆ ಮೊಕದ್ದಮೆಯಲ್ಲಿ ಜಪ್ತಿ ಮಾಡಲ್ಪಟ್ಟ 3557.880 ಲೀಟರ್ ಮದ್ಯದ ಮಾಲೀಕತ್ವವನ್ನು ಕೋರಿ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:379:ಡಿಟಿಸಿಆರ್: 2002-03 ದಿನಾಂಕ: 22.01.2003ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟಾಟಾ ಲಾರಿ ಸಂಖ್ಯೆ: ಎಂವೈಟಿ-6506ರ ಬಿಡುಗಡೆಗಾಗಿ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ಪತ್ರ ಸಂಖ್ಯೆ: 38/2002-03 ದಿನಾಂಕ: 02.10.2004ರಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟಾಟಾ ಲಾರಿ ಸಂಖ್ಯೆ: ಎಂವೈಟಿ-6506 ಇದರ ಆರ್.ಸಿ. ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತುಮಕೂರು, ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ ರವರಿಗೆ ಪತ್ರ ಬರೆಯಲಾಗಿದ್ದು, ಈವರೆಗೆ ಯಾವುದೇ ವರದಿ ಬಂದಿರುವುದಿಲ್ಲ. ವಶಪಡಿಸಿಕೊಂಡ ವಾಹನವನ್ನು ತೆರೆದ ಸ್ಥಳದಲ್ಲಿ ನಿಲ್ಲಿಸಿದ್ದು ಬಿಸಿಲು, ಮಳೆ, ಗಾಳಿಗೆ ತುಕ್ಕು ಹಿಡಿದು ನಶಿಸಿ ಹೋಗಿರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 27.12.2002 ರಂದು ಟಾಟಾ ಲಾರಿ ಸಂಖ್ಯೆ: ಎಂವೈಟಿ-6506 ಮದ್ಯ ಸಾಗಾಣಿಕೆ ಮಾಡುತ್ತಿದ್ದುದನ್ನು ಅಬಕಾರಿ ನಿರೀಕ್ಷಕರು, ನಂ.2 ಇ.ಐ.ಬಿ., ಮಂಗಳೂರು ವಿಭಾಗ, ಮಂಗಳೂರು ಇವರು ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಮದ್ಯವನ್ನು ಹಾಗೂ ಅಕ್ರಮ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತಿಪಡಿಸಿದ ದ್ರವ್ಯವು ಮದ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ. ಈ ಮೇಲಿನ ಹಿನ್ನೆಲೆಯಲ್ಲಿ ಆರೋಪಿಯು ಕಾನೂನು ಬಾಹಿರ ಕೃತ್ಯವನ್ನು ಎಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ ಹಾಗೂ ಅಕ್ರಮ ಮದ್ಯ ಸಾಗಾಣಿಕೆ ಆಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟಾಟಾ ಲಾರಿ ಸಂಖ್ಯೆ: ಎಂವೈಟಿ-6506 ನ್ನು ವಶಪಡಿಸಿಕೊಂಡು ಸುಮಾರು 2 ವರ್ಷ ಕಳೆದರೂ ಈ ಪ್ರಾಧಿಕಾರದ ಮುಂದೆ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಜಪ್ತಿಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು ಮುಂತಾದ ಹವಾಮಾನ ವೈಪರೀತ್ಯದಿಂದ ವಾಹನವು ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಅಬಕಾರಿ ನಿರೀಕ್ಷಕರು, ನಂ.2 ಇ.ಐ.ಬಿ., ಮಂಗಳೂರು ವಿಭಾಗರವರ ಮೊಕದ್ದಮೆ ಸಂಖ್ಯೆ: 23/2002-03 ದಿನಾಂಕ: 27.12.2002ರಂದು ವಶಪಡಿಸಿಕೊಂಡಿರುವ ವಾಹನ ಟಾಟಾ ಲಾರಿ ಸಂಖ್ಯೆ: ಎಂವೈಟಿ-6506ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 26.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1698

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 499/ ಡಿಟಿಸಿಆರ್/ 2002-2003, ದಿನಾಂಕ: 30ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** ವಿರುದ್ಧ **ಆರೋಪಿಗಳು**
ಪೊಲೀಸ್ ಉಪ ನಿರೀಕ್ಷಕರು, ಆರೋಪಿಗಳು ಪರಾರಿಯಾಗಿರುತ್ತಾರೆ.
ವಿಟ್ಲ ಪೊಲೀಸ್ ಠಾಣೆ, ವಿಟ್ಲ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 24.02.2003ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿಯವರೊಂದಿಗೆ ಕೇರಳ ರಾಜ್ಯಕ್ಕೆ ಹೋಗುವ ವಾಹನಗಳನ್ನು ತಪಾಸಣೆ ಮಾಡುತ್ತಿರುವ ಸಂದರ್ಭದಲ್ಲಿ ಕನ್ಯಾನ ಕಡೆಯಿಂದ ಒಂದು ಬಿಳಿ ಬಣ್ಣದ ಕಾರು ಮುಗುಳಿ ಜಂಕ್ಷನ್‌ನಲ್ಲಿ ಪೊಲೀಸರನ್ನು ಕಂಡ ಕಾರು, ಕನ್ಯಾನ ಕಡೆಗೆ

ಹಿಂತಿರುಗಿಸಲು ಪ್ರಯತ್ನಿಸುತ್ತಿರುವುದನ್ನು ಕಂಡು ಅನುಮಾನದ ಮೇರೆಗೆ ಇಲಾಖಾ ಜೀಪಿನಲ್ಲಿ ಬೆನ್ನಟ್ಟಿದಾಗ ಸದರಿ ಕಾರು, ಒಮ್ಮೆಲೇ ತಿರುಗಿಸಲಾಗದೇ ಕಾರಿನ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿ ಕಾರಿನಿಂದಿಳಿದು ಪರಾರಿಯಾಗಿರುತ್ತಾರೆ. ಸದರಿ ಕಾರನ್ನು ಪರಿಶೀಲಿಸಿದಾಗ ಅದು ಸಿಯೋಲೊ ಎಂಬ ಹೆಸರಿನ ಕಾರಾಗಿದ್ದು, ಕಾರಿನ ಹಿಂದೆ ಮುಂದೆ ಪಿವೈ-01ಇ-3311 ಎಂಬ ನಾಮಫಲಕದ ನಂಬರ್ ಪ್ಲೇಟ್‌ಗಳನ್ನು ಅಳವಡಿಸಿರುತ್ತಾರೆ. ಅನುಮಾನದ ಮೇರೆಗೆ ಸದರಿ ಕಾರನ್ನು ಪರಿಶೀಲಿಸಿದಾಗ ಅದರ ಡಿಕ್ಕಿಯನ್ನು ನೋಡಲಾಗಿ, ಡಿಕ್ಕಿಯನ್ನು ಪ್ರತ್ಯೇಕ ಕ್ಯಾಬಿನ್ ರೀತಿಯಲ್ಲಿ ಮಾಡಿಕೊಂಡು ಇದರಲ್ಲಿ 3 ಬಕ್ಕ್ ಹಗ್ಗದಿಂದ ಬಾಯಿ ಕಟ್ಟಿರುವ ಪಾಲಿಥೀನ್ ಚೀಲಗಳಿರುವುದು ಮತ್ತು 4 ಪ್ಲಾಸ್ಟಿಕ್ ಕ್ಯಾನ್‌ಗಳು ಇರುವುದು ಕಂಡು ಬಂದಿತು. ಪಾಲಿಥೀನ್ ಚೀಲಗಳಲ್ಲಿ ಸಾರಾಯಿ ತೊಟ್ಟೆಗಳು ಮತ್ತು ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಸ್ಪಿರಿಟ್ ತುಂಬಿಸಿರುತ್ತಾರೆ. ವಾಹನ ತಪಾಸಣೆ ನಡೆಸುವ ಸಂದರ್ಭದಲ್ಲಿ ಆಕಸ್ಮಿಕವಾಗಿ ಈ ಕಾರು ಪತ್ತೆಯಾಗಿದ್ದು, ಕಾರನ್ನು ತಪಾಸಣೆ ನಡೆಸಲು ಅಬಕಾರಿ ಕಾಯ್ದೆ ಕಲಂ 53ರ ಪ್ರಕಾರ ಸಂಬಂಧಪಟ್ಟ ನ್ಯಾಯಾಲಯದಿಂದ ವಾರೆಂಟ್ ಪಡೆಯಲು ಸಮಯಾವಕಾಶ ಇಲ್ಲದ ಕಾರಣ ಮತ್ತು ರಸ್ತೆಗೆ ಅಡ್ಡವಾಗಿದ್ದ ಕಾರನ್ನು ಸರಿಪಡಿಸಿ ನಿಲ್ಲಿಸುವ ಮೊದಲು ಕರ್ನಾಟಕ ಅಬಕಾರಿ ಕಾಯಿದೆ 1954ರಲ್ಲಿ ನೀಡಿದ್ದ ಅಧಿಕಾರವನ್ನು ಚಲಾಯಿಸಿ ಸಾರಾಯಿ ತೊಟ್ಟೆಗಳನ್ನು ಹಾಗೂ ಮದ್ಯಸಾರ ತುಂಬಿದ ಕ್ಯಾನ್‌ಗಳನ್ನು ಪರಿಶೀಲಿಸಲಾಗಿ ಅವುಗಳು ಈ ಕೆಳಗಿನಂತಿರುತ್ತದೆ.

1. 3 ಪಾಲಿಥೀನ್ ಚೀಲಗಳಲ್ಲಿ 100 ಎಂ.ಎಲ್. ನ 500 ಸಾರಾಯಿ ತೊಟ್ಟೆಗಳಂತೆ ಒಟ್ಟು 1500 ಸಾರಾಯಿ ತೊಟ್ಟೆಗಳಿರುವುದು ಕಂಡು ಬರುತ್ತದೆ.

2. 35 ಲೀಟರು ಸಾಮರ್ಥ್ಯದ 4 ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ ಒಟ್ಟು 140 ಲೀಟರು ಮದ್ಯಸಾರ ಸಂಗ್ರಹಿಸಿರುವುದು ಕಂಡು ಬರುತ್ತದೆ.

ಕಾರಿನಲ್ಲಿದ್ದ ಸಾರಾಯಿ ತೊಟ್ಟೆಗಳನ್ನು ಮತ್ತು ಮದ್ಯಸಾರವನ್ನು ಸಾಗಾಣಿಕೆ ಮಾಡಲು ಯಾವುದೇ ಅಧಿಕೃತ ರಹದಾರಿ ಪತ್ರಗಳು ದೊರಕದೇ ಇರುವುದರಿಂದ ಇದು ಕಳ್ಳ ಸಾಗಾಣಿಕೆಯಿಂದ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುವುದು ಹಾಗೂ ಆರೋಪಿಗಳು ಪರಾರಿಯಾಗಿರುವುದರಿಂದ ಇದು ಅಕ್ರಮ ಕಳ್ಳ ಸಾಗಾಣಿಕೆಯಾಗಿರುವುದು ಖಚಿತವಾಗಿರುತ್ತದೆ. ಆದುದರಿಂದ ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34 ಮತ್ತು 43(3)ರ ಪ್ರಕಾರ ಅಪರಾಧವಾಗಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಹಾಗೂ ಮದ್ಯಸಾರದ ಕ್ಯಾನುಗಳನ್ನು ಸ್ವಾಧೀನ ಪಡಿಸಿಕೊಂಡು, ಸಾರಾಯಿ ತೊಟ್ಟೆಗಳಿಂದ ರಾಸಾಯನಿಕ ಪರೀಕ್ಷೆಗಾಗಿ 100 ಎಂ.ಎಲ್. ನ 3 ಸಾರಾಯಿ ತೊಟ್ಟೆಗಳನ್ನು ಮತ್ತು ಕ್ಯಾನಿನಿಂದ 180 ಎಂ.ಎಲ್.ನ ಬಾಟ್ಲಿಗಳಲ್ಲಿ ಮದ್ಯಸಾರವನ್ನು ತೆಗೆದು ಅದರ ಬಾಯಿಗೆ ಎಸ್.ಹೆಚ್.ಓ. ಸೀಲ್‌ನಿಂದ ಸೀಲು ಮಾಡಿರುತ್ತಾರೆ. ಸಾಗಾಟಕ್ಕೆ ಉಪಯೋಗಿಸಿದ್ದ ಕಾರು ಸಿಯೆಲ್ಲೊ, ಇದರ ಚಾಸೀಸ್ ಸಂಖ್ಯೆ: 19 ಟಿಒಐಹೆಚ್-00259 ಮತ್ತು ಇಂಜಿನ್ ಸಂಖ್ಯೆ: ಜಿ-15-ಎಂಎಫ್-255599 ಆಗಿರುತ್ತದೆ. ಕಾರಿನ ನೊಂದಣಿ ಸಂಖ್ಯೆ: ಪಿವೈ-01-ಇ-3311 ಆಗಿರುತ್ತದೆ. ಮಹಜರನ್ನು ಅದೇ ಸ್ಥಳದಲ್ಲಿಯೇ ಬರೆದು ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 13/03 ದಿನಾಂಕ: 24.02.2003ರಂದು ದಾಖಲಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಈ ಪ್ರಾಧಿಕಾರದ ಆದೇಶದ ಮೇರೆಗೆ ಮೊಕದ್ದಮೆಯಲ್ಲಿ ಜಪ್ತಿ ಮಾಡಲ್ಪಟ್ಟ ಸೊತ್ತುಗಳನ್ನು ಹಾಗೂ ದಾಖಲಾತಿಗಳನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯಲ್ಲಿ ಜಪ್ತಿ ಮಾಡಲ್ಪಟ್ಟ ಸಾರಾಯಿ ತೊಟ್ಟೆಗಳನ್ನು ಹಾಗೂ ಮದ್ಯಸಾರದ ಸೊತ್ತಿನ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ ಸಾರಾಯಿ ತೊಟ್ಟೆಗಳನ್ನು ಹಾಗೂ ಮದ್ಯಸಾರವನ್ನು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 30.05.2003ರಂದು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲಾಗಿರುತ್ತದೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಿಯಲೋ ಕಾರು ಸಂಖ್ಯೆ: ಪಿವೈ-01-ಇ-3311ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 9 ತಿಂಗಳು ಕಳೆದಿದ್ದರೂ ಈ ಪ್ರಾಧಿಕಾರದ ಮುಂದೆ ಯಾರೂ ವಾಹನ ಬಿಡುಗಡೆಗಾಗಿ ಅರ್ಜಿ ಸಲ್ಲಿಸಿರುವುದಿಲ್ಲ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರ ತನಿಖಾ ವರದಿ ಸಂಖ್ಯೆ: ಬಿಎನ್‌ಟಿ: ಆರ್‌ಸಿಆರ್:84: 2002-03 ದಿನಾಂಕ: 26.11.2004ರಲ್ಲಿ ವಶಪಡಿಸಿಕೊಂಡ ಸಿಯೊಲೋ ಕಾರು ಸಂಖ್ಯೆ: ಪಿವೈ-01-ಇ-3311ರ "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಸಾರಿಗೆ ಅಧಿಕಾರಿಗಳು ಪಾಂಡಿಚೇರಿ ಇವರಿಗೆ ನೊಂದಣಿ ಅಂಚೆ ಮೂಲಕ ಬರೆಯಲಾಗಿದ್ದು, ಸದ್ರಿಯವರ ಕಛೇರಿಯಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ ಹಾಗೂ ಸದರಿ ವಾಹನವನ್ನು ಸ್ವಾಧೀನ ಪಡೆಯಲು ಯಾರೂ ಈ ಪ್ರಾಧಿಕಾರಕ್ಕೆ ಸಂಪರ್ಕಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನವನ್ನು ತೆರೆದ ಸ್ಥಳದಲ್ಲಿ ನಿಲ್ಲಿಸಿರುವುದರಿಂದ ಇದು ಮಳೆ, ಗಾಳಿ, ಬಿಸಿಲಿನಿಂದ ತುಕ್ಕು ಹಿಡಿದು ಹಾಳಾಗುವ ಸಂಭವವಿರುತ್ತದೆ. ಆದುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರು ಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 24.02.2003ರಂದು ಸದರಿ ಕಾರಿನಲ್ಲಿ ಅಕ್ರಮವಾಗಿ ಸಾರಾಯಿ ತೊಟ್ಟೆ ಮತ್ತು ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿರುವುದನ್ನು ಪೊಲೀಸು ಉಪ ನಿರೀಕ್ಷಕರು, ವಿಟ್ಲ ಪೊಲೀಸು ಠಾಣೆ, ವಿಟ್ಲ ಇವರು ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಸಾರಾಯಿ ಮತ್ತು ಮದ್ಯಸಾರ ಮತ್ತು ಸಾಗಾಣಿಕೆಗಾಗಿ ಬಳಸಿದ ಸಿಯಾಲೊ ಕಾರನ್ನು ಸರ್ಕಾರಕ್ಕೆ ವಶಪಡಿಸಿಕೊಂಡಿರುತ್ತಾರೆ. ಜಪ್ತುಪಡಿಸಿರುವ ದ್ರವ್ಯವು ರಾಸಾಯನಿಕ ತಜ್ಞರ ಪ್ರಕಾರ ಸಾರಾಯಿ ಮತ್ತು ಮದ್ಯಸಾರವೆಂದು ದೃಢಪಟ್ಟಿರುತ್ತದೆ. ಮತ್ತು ಆರೋಪಿಯು ಪರಾರಿಯಾಗಿರುವುದರಿಂದ ಈ ಕೃತ್ಯವೆಸಗಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಹಾಗೂ ಅಕ್ರಮ ಸಾರಾಯಿ ಮತ್ತು ಮದ್ಯಸಾರವನ್ನು ಸಿಯಾಲೊ ಕಾರಿನಲ್ಲಿ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನ ಮತ್ತು ಸೊತ್ತುಗಳನ್ನು ಜಪ್ತುಪಡಿಸಿ ಸುಮಾರು 1 ವರ್ಷ 9 ತಿಂಗಳು ಕಳೆದಿದ್ದರೂ, ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತುಪಡಿಸಿದ ವಾಹನವನ್ನು ತೆರೆದ ಜಾಗದಲ್ಲಿ ಇಟ್ಟಿರುವುದರಿಂದ ಮಳೆ, ಬಿಸಿಲು, ಮುಂತಾದ ಹವಾಮಾನದ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ವಶಪಡಿಸಿಕೊಂಡು ಸುಮಾರು 1 ವರ್ಷ 9 ತಿಂಗಳು ಕಳೆದಿದ್ದರೂ ಇದು ಹಾಳಾಗುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ

ಸಿಯಾಲೊ ಕಾರು ಸಂಖ್ಯೆ: ಪಿವೈ-01-ಇ-3311 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತ ಎಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸು ಉಪ ನಿರೀಕ್ಷಕರು, ವಿಟ್ಲ ಪೊಲೀಸು ಠಾಣೆ, ವಿಟ್ಲ ಇವರ ಮೊಕದ್ದಮೆ ಸಂಖ್ಯೆ: 13/2003 ದಿನಾಂಕ: 24.02.2003ರಂದು ವಶಪಡಿಸಿಕೊಂಡಿರುವ ವಾಹನ ಸಿಯಾಲೊ ಕಾರು ಸಂಖ್ಯೆ: ಪಿವೈ-01-ಇ-3311ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 30.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಪಿ.ಆರ್. 1699

ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 373/ ಡಿಟಿಸಿಆರ್/ 2001-2002, ದಿನಾಂಕ: 24ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ನಿರೀಕ್ಷಕರು,
ಬಂಟ್ವಾಳ ಉಪ ವಿಭಾಗ,
ಬಂಟ್ವಾಳ.

**ವಿರುದ್ಧ**

**ಆರೋಪಿಗಳು**
1) ಶ್ರೀ ಮಹಮ್ಮದ್ ಇಕ್ಬಾಲ್, ಬಿನ್: ಎಂ. ಖಾದಿರ್, ಉರ್ನಿ ಹೌಸ್, ಕೊಡ್ಲ, ಮುಗೇರ್ ಪೋಸ್ಟ್, ಮಂಜೇಶ್ವರ, ಕಾಸರಗೋಡು.
2) ರಮೇಶ್ ಶೆಟ್ಟಿ, ಬಿನ್: ಮಾದವಪ್ಪ ಶೆಟ್ಟಿ, ಪವ್ವ, ವರ್ಕಾಡಿ ಮಂಜೇಶ್ವರ, ಕಾಸರಗೋಡು.

**ಅರ್ಜಿದಾರರು:**
ಶ್ರೀ ಎಂ. ಅಬ್ದುಲ್ಲ, ಬಿನ್ ಮಹಮ್ಮದ್ ಕುಂಞ್ಞಿ, ವರ್ಕಾಡಿ ಪೋಸ್ಟ್ ಮತ್ತು ಅಂಚೆ, ಕಾಸರಗೋಡು ಇವರ ಜಿ.ಪಿ.ಎ. ದಾರರಾದ ಶ್ರೀ ಅಬ್ಬೂಬಕ್ಕರ್, ಬಿನ್ ಇಸ್ಮಾಯಿಲ್, ನೀಡಿಬೈಲ್ ಹೌಸ್, ಕಡಂಬೂರು ಪೋಸ್ಟ್, ಮಂಜೇಶ್ವರ, ಕಾಸರಗೋಡು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 20.02.2002ರಂದು ಬಂಟ್ವಾಳ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರಕ್ಕೆ ಒಂದು ವರದಿಯನ್ನು ಮತ್ತು ಪ್ರಕರಣಕ್ಕೆ ಸಂಬಂಧಿಸಿದ ಪ್ರ.ಮಾ.ವ. ಮತ್ತು ಮಹಜರು, ವಶಪಡಿಸಿಕೊಂಡ ಸೊತ್ತುಗಳಾದ ಒಂದು ಬಜಾಜ್ ಆಟೋ ರಿಕ್ಷಾ ನಂ. ಕೆಎಲ್-14ಸಿ-378 ಮತ್ತು ಇತರೇ ಮದ್ಯದ ಬಾಟಲಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿ ವಶಪಡಿಸಿಕೊಂಡ ವಸ್ತುಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಗೊಳ್ಳುವಂತೆ ವಿನಂತಿಸಿರುತ್ತಾರೆ. ಸದರಿ ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದ ಮುಖ್ಯಾಂಶಗಳು ಈ ರೀತಿ ಇರುತ್ತದೆ.

ದಿನಾಂಕ: 19.02.2002ರಂದು ಸಂಜೆ ವೇಳೆ 5-45 ಗಂಟೆ ಸಮಯಕ್ಕೆ ಬಂಟ್ವಾಳ ಉಪ ವಿಭಾಗದ ಅಬಕಾರಿ ನಿರೀಕ್ಷಕರು ಹಾಗೂ ಸಿಬ್ಬಂದಿಗಳು ಬಂಟ್ವಾಳ ತಾಲ್ಲೂಕು ಮುಡಿಪುವಿನಿಂದ ಇರಾಕ್ಕೆ ಹೋಗುವ ರಸ್ತೆಯಲ್ಲಿ ಸೋಮನಾಥೇಶ್ವರ ದೇವಸ್ಥಾನದ ಮಹಾದ್ವಾರದ ಬಳಿ ಕಾದು ಕುಳಿತಿದ್ದು, ಒಂದು ಆಟೋ ರಿಕ್ಷಾವು ಮಂಗಳೂರು ಕಡೆಯಿಂದ ವೇಗವಾಗಿ ಬಂದು, ಮಹಾದ್ವಾರದ ಬಳಿ ತಲುಪಿದಾಗ ಅನುಮಾನದ ಮೇರೆಗೆ ಅಬಕಾರಿ ಅಧಿಕಾರಿಯವರು ಸೀಟಿ ಬಾರಿಸಿ ಕೈ ಬೀಸಿ ರಿಕ್ಷಾವನ್ನು ನಿಲ್ಲಿಸುವಂತೆ ಸೂಚಿಸಿದ್ದರು. ಅಷ್ಟರಲ್ಲಿ ರಿಕ್ಷಾ ಚಲಾಯಿಸುತ್ತಿದ್ದ ವ್ಯಕ್ತಿ ಹಾಗೂ ಹಿಂದೆ ಕುಳಿತಿದ್ದ ಇನ್ನೊಬ್ಬ ವ್ಯಕ್ತಿ ರಿಕ್ಷಾವನ್ನು ನಿಲ್ಲಿಸಿ ತಾವು ಬಂದ ದಿಕ್ಕಿನತ್ತ ಓಡತೊಡಗಿದ್ದರು. ಎಲ್ಲರೂ ಸೇರಿ ಅವರನ್ನು ಬೆನ್ನಟ್ಟಿ ತಡೆದು ನಿಲ್ಲಿಸಿ, ರಿಕ್ಷಾ ಚಲಾಯಿಸುತ್ತಿರುವ ವ್ಯಕ್ತಿಯ ಹೆಸರು ವಿಳಾಸ ವಿಚಾರಿಸಿದಾಗ ತಾನು ಮಹಮ್ಮದ್ ಇಕ್ಬಾಲ್, ಪ್ರಾಯ:21 ವರ್ಷ ಬಿನ್: ಯು.ಎಂ.ಖಾದಿರ್, ಉರ್ನಿ ಹೌಸ್, ಕೊಡ್ಲ ಮುಗೇರ್ ಪೋಸ್ಟ್ ಮಂಜೇಶ್ವರ ಕಾಸರಗೋಡು ಮತ್ತು ಇನ್ನೊಬ್ಬ ವ್ಯಕ್ತಿಯನ್ನು ವಿಚಾರಿಸಿದಾಗ ತಾನು ರಮೇಶ ಶೆಟ್ಟಿ (22 ವರ್ಷ) ಬಿನ್: ಮಾದವಪ್ಪ ಶೆಟ್ಟಿ, ವಾಸ: ವರ್ಕಾಡಿ ಮಂಜೇಶ್ವರ ಕಾಸರಗೋಡು ಎಂದು ತಿಳಿಸಿದ್ದರು. ಸದರಿ ವಾಹನವನ್ನು ಪರಿಶೀಲಿಸಿದಾಗ ಅದು ಕೆಎಲ್-14-ಸಿ-378 ನಂಬರ್ ಆಗಿದ್ದು ಇದು ಹಳದಿ ಕಪ್ಪು ಬಣ್ಣ ಹೊಂದಿದ್ದು, 2000 ಮಾಡೆಲ್ ಬಜಾಜ್ ಆಟೋ ರಿಕ್ಷಾ ಆಗಿದ್ದು ಕಂಡು ಬಂತು. ದಾಖಲೆಗಳ ಬಗ್ಗೆ ವಿಚಾರಿಸಿದಾಗ ತನ್ನಲ್ಲಿ ಯಾವುದೇ ದಾಖಲಾತಿಗಳು ಅಥವಾ ಚಾಲಕನ ಲೈಸನ್ಸ್ ಇಲ್ಲವೆಂದು ಚಾಲಕನು ತಿಳಿಸಿರುತ್ತಾನೆ. ನಂತರ ರಿಕ್ಷಾವನ್ನು ಪರಿಶೀಲಿಸಿದಾಗ ಅದರ ಡಿಕ್ಕಿಯಲ್ಲಿ ಹಾಗೂ ಹಿಂಭಾಗದ ಸೀಟನ್ನು ಪರಿಶೀಲಿಸಲಾಗಿ ಅದರಲ್ಲಿ ಒಟ್ಟು 6 ಪೆಟ್ಟಿಗೆಗಳಲ್ಲಿ ಈ ಕೆಳಗಿನಂತೆ ಮದ್ಯ ಇರುವುದು ಕಂಡು ಬಂತು.

1. ಕೊಲಂಬಿಯಾ ವಿಸ್ಕಿ-750 ಎಂಎಲ್ 12 ಸೀಸೆಗಳಂತೆ 2 ಪೆಟ್ಟಿಗೆ-18.000 ಲೀಟರು.
2. ಕೊಲಂಬಿಯಾ ವಿಸ್ಕಿ-375 ಎಂಎಲ್ 24 ಸೀಸೆಗಳಂತೆ 4 ಪೆಟ್ಟಿಗೆ-36.000 ಲೀಟರು.

ಒಟ್ಟು 6 ಪೆಟ್ಟಿಗೆಯಲ್ಲಿ 54.000 ಲೀಟರು ಕೊಲಂಬಿಯಾ ವಿಸ್ಕಿ ಇರುವುದು ಕಂಡು ಬಂತು. ಸದರಿ ಮದ್ಯವನ್ನು ಸಾಗಿಸಲು ತನ್ನ ಬಳಿ ಯಾವುದೇ ಅಬಕಾರಿ ರಹದಾರಿ ಪತ್ರ ಇರುವುದಿಲ್ಲವೆಂದು ತಿಳಿಸಿರುತ್ತಾನೆ. ವಾಹನದ ಇಂಜಿನ್ ನಂಬರ್ ಮತ್ತು ಚಾಸೀಸ್ ನಂಬರ್ ಪರಿಶೀಲಿಸಿ,

ಅದನ್ನು ದಾಖಲಿಸಿದೆವು. ನಂತರ ಅಧಿಕಾರಿಯವರು ಸದರಿ ಮದ್ಯದ 750 ಎಂಎಲ್‌ನ ಸೀಸೆಗಳ ಪೈಕಿ 1 ಸೀಸೆಯನ್ನು ಹಾಗೂ 375 ಎಂಎಲ್ ಸೀಸೆಗಳ ಪೈಕಿ 1 ಸೀಸೆ ರಾಸಾಯನಿಕ ವಿಶ್ಲೇಷಣೆಗಾಗಿ ಪ್ರತ್ಯೇಕಿಸಿ, ಅವುಗಳ ಬಾಯಿಗೆ ಬಟ್ಟೆ ಸುತ್ತಿ ಇಲಾಖಾ ಸೀಲಿನಿಂದ ಸೀಲು ಮಾಡಿ, ಮಾದರಿ ಸೀಲನ್ನು ತಯಾರಿಸಿದೆವು. ಮಾದರಿ ಸೀಸೆಗಳ ಮೇಲೆ ಚೀಟಿ ಅಂಟಿಸಲಾಯಿತು. ಅಕ್ರಮವಾಗಿ ಮದ್ಯ ಹೊಂದಿ ಸಾಗಿಸುತ್ತಿದ್ದ ವಾಹನ ಹಾಗೂ ಮದ್ಯವನ್ನು ವಶಕ್ಕೆ ತೆಗೆದುಕೊಂಡು ಇನ್ನೊಬ್ಬ ಆರೋಪಿಯನ್ನು ದಸ್ತಗಿರಿ ಮಾಡಿ, ಸ್ಥಳದಲ್ಲಿಯೇ ಒಂದು ವಿವರವಾದ ಯಾದಸ್ತನ್ನು ತಯಾರಿಸಲಾಯಿತು. ಮತ್ತು 2 ಜನ ಪಂಚರ ಸಹಿಯನ್ನು ಸಹ ಸದರಿ ಯಾದಾಸ್ತಿನಲ್ಲಿ ಪಡೆದು ಅಬಕಾರಿ ಅಧಿಕಾರಿಗಳು ಸಹಿ ಮಾಡಿರುತ್ತಾರೆ. ನಂತರ ಸ್ಥಳದಲ್ಲಿಯೇ ಸೊತ್ತುಗಳನ್ನು ಹಾಗೂ ಆರೋಪಿಗಳನ್ನು ವಶಕ್ಕೆ ಪಡೆದುಕೊಂಡು ಕಛೇರಿಗೆ ಬಂದು ಮೊಕದ್ದಮೆಯನ್ನು ದಾಖಲಿಸಿ ಪ್ರ.ಮಾ.ವ. ಸಂಖ್ಯೆ: 30/01-02 ದಿನಾಂಕ: 19.02.2002ನ್ನು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಲಾಯಿತು. ಮತ್ತು ವಶಪಡಿಸಿಕೊಂಡ ಸೊತ್ತುಗಳ ವರದಿಯನ್ನು ಅಬಕಾರಿ ಅಧೀಕ್ಷಕರು, ಮಂಗಳೂರು ಇವರಿಗೆ ಸಲ್ಲಿಸಲಾಯಿತು. ನಂತರ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎಲ್-14-ಸಿ-378ರ ನೋಂದಾಯಿತ ಮಾಲೀಕರಾದ ಶ್ರೀ ಎಂ. ಅಬ್ದುಲ್ಲ ಇವರ ಜಿ.ಪಿ.ಎ. ದಾರರಾದ ಅಬ್ಬೂಬಕ್ಕರ್ ವಕೀಲರ ಮುಖಾಂತರ ಒಂದು ಅರ್ಜಿಯನ್ನು ಸಲ್ಲಿಸಿ ತಾನು ನಿರಪರಾಧಿಯೆಂದು ಮತ್ತು ವಶಪಡಿಸಿಕೊಂಡ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡಿದ ವಿಷಯ ತನಗೆ ತಿಳಿಯದೇ ಮತ್ತು ತನ್ನ ಗಮನಕ್ಕೆ ಬಾರದೇ ವಾಹನವು ಉಪಯೋಗಿಸಲ್ಪಟ್ಟಿದೆ ಎಂದು ತಿಳಿಸಿರುತ್ತಾರೆ. ಮತ್ತು ತನಗೆ ವಾಹನವನ್ನು ಬಿಟ್ಟುಕೊಡುವಂತೆ ಕೋರಿ ದಿನಾಂಕ: 18.03.2002ರಂದು ಅರ್ಜಿಯನ್ನು ಸಲ್ಲಿಸಿರುತ್ತಾರೆ. ನಂತರ ಅವರು ಸಲ್ಲಿಸಿದ್ದ ಅರ್ಜಿಯನ್ನು ಮತ್ತು ತಕರಾರುಗಳನ್ನು ಪರಿಶೀಲಿಸಿ ದಿನಾಂಕ: 08.05.2002ರಂದು ಈ ಪ್ರಾಧಿಕಾರದ ಆದೇಶ ಸಂಖ್ಯೆ:ಎಸ್‌ಡಿಕೆ:373:ಡಿಟಿಸಿಆರ್: 2001-02ರ ಆದೇಶದಂತೆ ವಶಪಡಿಸಿಕೊಂಡ ವಾಹನ ಆಟೋ ರಿಕ್ಷಾ ಸಂಖ್ಯೆ: ಕೆಎಲ್-14-ಸಿ-378ನ್ನು ನೋಂದಣಿ ಮಾಲೀಕರಾದ ಶ್ರೀ ಎಂ. ಅಬ್ದುಲ್ಲ ಇವರಿಗೆ ಬ್ಯಾಂಕ್ ಗ್ಯಾರಂಟಿಯ ಭದ್ರತೆಯ ಆಧಾರದ ಮೇಲೆ ಕೆಲವು ಷರತ್ತುಗಳಿಗೆ ಒಳಪಟ್ಟು ಮಧ್ಯಂತರ ಬಿಡುಗಡೆ ಮಾಡಲಾಗಿದೆ.

ಈ ಪ್ರಕರಣದಲ್ಲಿ ವಿಚಾರಣೆ ಕೈಗೊಂಡು ಅಭಿಯೋಜನ ಪರ ಸಾಕ್ಷಿದಾರರಿಗೆ ನೋಟೀಸು ನೀಡಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸಾಕ್ಷಿ ನುಡಿಯಲು ತಿಳಿಸಲಾಯಿತು. ಅಭಿಯೋಜನ ಪರವಾಗಿ ಒಟ್ಟು ಪಿಡಬ್ಲ್ಯೂ-1 ರಿಂದ ಪಿಡಬ್ಲ್ಯೂ-3 ಎಂದು ಮತ್ತು ಪ್ರತಿರಕ್ಷಾ ಪರವಾಗಿ ಡಿಡಬ್ಲ್ಯೂ-1 ಎಂದು ಸಾಕ್ಷ್ಯಾಧಾರರನ್ನು ಹಾಜರುಪಡಿಸಲಾಗಿದೆ. ಅಭಿಯೋಜನ ಪರವಾಗಿ ನಿಶಾನೆ ಪಿ-1 ರಿಂದ ನಿಶಾನೆ ಪಿ-5ರ ವರೆಗೆ ಇರುವ ದಾಖಲಾತಿಗಳನ್ನು ಹಾಜರುಪಡಿಸಲಾಗಿದೆ. ಈ ಪ್ರಕರಣದಲ್ಲಿ ಅಭಿಯೋಜನ ಪರ ದಾಖಲೆಗಳನ್ನು ಮತ್ತು ವಾಹನದ ಮಾಲೀಕರು ಸಲ್ಲಿಸಿದ ಅರ್ಜಿ ಮತ್ತು ಅವರ ಪರ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ವಿವಿಧಾಂಶಗಳನ್ನು ತೀರ್ಮಾನಿಸುವುದು ಅವಶ್ಯವಾಗಿರುತ್ತದೆ.

1) ದಿನಾಂಕ: 19.02.2002ರಂದು ವಾಹನ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎಲ್-14-ಸಿ-378ರಲ್ಲಿ ಅಕ್ರಮವಾಗಿ ಮದ್ಯ ಸಾಗಣೆ ಮಾಡಲಾಗಿತ್ತೇ?
2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?
3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಪ್ರಕರಣದಲ್ಲಿ ಅಭಿಯೋಜನ ಪರ ಒಟ್ಟು ಪಿಡಬ್ಲ್ಯೂ-1 ರಿಂದ ಪಿಡಬ್ಲ್ಯೂ-3 ಎಂದು ವಿಚಾರಿಸಲಾಗಿದೆ.

**ಪ್ರಾ.ಸಾ.-1**

ಶ್ರೀ ರವೀಂದ್ರ ಕೋಟೆಕಾರ್, ಅಬಕಾರಿ ನಿರೀಕ್ಷಕರು ಈ ಪ್ರಾಧಿಕಾರದ ಮುಂದೆ ದಿನಾಂಕ: 18.11.2003 ರಂದು ಹಾಜರಾಗಿ ಹೇಳಿಕೆ ನೀಡಿರುತ್ತಾರೆ. ಈ ಸಾಕ್ಷಿದಾರರು ಸಾಕ್ಷಿ ನುಡಿಯುತ್ತಾ ದಿನಾಂಕ: 19.02.2002ರಂದು ಸಿಬ್ಬಂದಿಗಳೊಂದಿಗೆ ಬಂದು, ಮುಡಿಪು ಗ್ರಾಮದ ಸೋಮನಾಥೇಶ್ವರ ದೇವಸ್ಥಾನದ ಮಹಾ ದ್ವಾರದ ಬಳಿ ಗಸ್ತು ತಿರುಗುವಾಗ ಬರುತ್ತಿದ್ದ ರಿಕ್ಷಾ ಒಂದನ್ನು ಕಂಡು ಸಂಶಯದ ಮೇರೆಗೆ ತಡೆದು ನಿಲ್ಲಿಸಿ, ರಿಕ್ಷಾ ಚಾಲಕರಲ್ಲಿ ಸರ್ಚ್ ಮೆಮೋವನ್ನು ಕೊಟ್ಟು, ರಿಕ್ಷಾ ಪರಿಶೀಲಿಸಲಾಗಿ ಅದರ ಹಿಂಭಾಗದ ಡಿಕ್ಕಿಯಲ್ಲಿ 6 ಪೆಟ್ಟಿಗೆ ಕೊಲಂಬಿಯಾ ವಿಸ್ಕಿ ಇರುವುದು ಕಂಡುಬಂತು. ಅವುಗಳ ಪೈಕಿ 2 ಪೆಟ್ಟಿಗೆಗಳಲ್ಲಿ ತಲಾ 12 ರಂತೆ 750 ಎಂಎಲ್ ಸೀಸೆಯಿದ್ದು ಹಾಗೂ 4 ಪೆಟ್ಟಿಗೆಗಳಲ್ಲಿ 375 ಎಂಎಲ್‌ನ ಪ್ರತಿ 24 ರಂತೆ ಸೀಸೆಗಳು ಇರುವುದು ಕಂಡು ಬಂತು. ಸದರಿ ಮದ್ಯದ ಬಾಟಲುಗಳನ್ನು ಸಾಗಿಸಲು ಅವಶ್ಯ ಇದ್ದ ರಹದಾರಿ ಪತ್ರವನ್ನು ವಿಚಾರಿಸಿದಾಗ ಯಾವುದೇ ದಾಖಲಾತಿಗಳು ಇಲ್ಲವೆಂದು ತಿಳಿಸಿದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ತಿಳಿಸಿ ಕಾನೂನಿನಂತೆ ಕ್ರಮಕೈಗೊಳ್ಳಲು ಮಾದರಿ ಶೀಷೆಗಳನ್ನು ತಯಾರಿಸಿ ಸೀಲು ಮಾಡಿ ಸ್ಥಳದಲ್ಲಿಯೇ ಮಹಜರು ತಯಾರಿಸಿ ನಂತರ ವಾಹನ ಮತ್ತು ಮದ್ಯದ ಸೊತ್ತುಗಳನ್ನು ವಶಪಡಿಸಿಕೊಂಡು ಮೊಕದ್ದಮೆ ದಾಖಲಿಸಿ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಿರುವ ಬಗ್ಗೆ ವರದಿ ನೀಡಿರುತ್ತಾರೆ. ನಂತರ ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಿದ ವರದಿಯನ್ನು ನಿಶಾನೆ ಪಿ-1 ಎಂದು, ಸ್ಥಳದಲ್ಲಿಯೇ ತಯಾರಿಸಿದ ಯಾದಾಸ್ತನ್ನು ನಿಶಾನೆ ಪಿ-2 ಎಂದು ಮತ್ತು ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಈ ಸಾಕ್ಷಿಯು ತನ್ನ ಹೇಳಿಕೆಯಲ್ಲಿ ಆಟೋ ರಿಕ್ಷಾದ ನೊಂದಣಿ ಮಾಲೀಕರ ಬಗ್ಗೆ ತನಗೆ ಯಾವುದೇ ಮಾಹಿತಿ ಕೊಡಲಿಲ್ಲವೆಂದು ನುಡಿದಿರುತ್ತಾರೆ. ಈ ಸಾಕ್ಷಿದಾರರು ವಾಹನ ಮಾಲೀಕರ ಪರ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ತನ್ನ ಪಾಟೀ ಸವಾಲಿನಲ್ಲಿ ಆ ದಿನ ಎಷ್ಟು ವಾಹನಗಳನ್ನು ತಪಾಸಣೆ ಮಾಡಿದ್ದು ಎಂಬುದರ ಬಗ್ಗೆ ತನಗೆ ಗೊತ್ತಿಲ್ಲವೆಂದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯ ಸದರಿ ವಾಹನವನ್ನು ಪರಿಶೀಲಿಸುವ ಮುನ್ನ ಮಾನ್ಯ ನ್ಯಾಯಾಲಯದಿಂದ ವಾರೆಂಟ್ ಪಡೆದ ಬಗ್ಗೆ ಆಗಲೀ ಅಥವಾ ಪಡೆಯದೇ ಇದ್ದ ಬಗ್ಗೆ ಕಾರಣಗಳನ್ನು ನಮೂದಿಸಿ ಒಂದು ಮೆಮೋವನ್ನು ತಯಾರಿಸಿದ ಬಗ್ಗೆ ಸಾಕ್ಷಿ ನುಡಿದಿರುವುದಿಲ್ಲ.

**ಪ್ರಾ.ಸಾ. -2**

ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಪಿಡಬ್ಲ್ಯೂ-2 ರವರು ಈ ಪ್ರಕರಣದ ತನಿಖೆಯನ್ನು ಕೈಗೊಂಡವರಾಗಿದ್ದು, ದಿನಾಂಕ: 13.11.2003 ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯು ತಾನು ತಕ್ಷೀರಿನ ದಾಖಲೆ ಪತ್ರ ಹಾಗೂ ಸೊತ್ತುಗಳನ್ನು ಮುಂದಿನ ನಡವಳಿಕೆಗೆ ಪಡೆದುಕೊಂಡು ಮಾದರಿ ಸೀಸೆಗಳನ್ನು ಕಛೇರಿಯ ಅಬಕಾರಿ ರಕ್ಷಕರ ಮುಖಾಂತರ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು ಮತ್ತು ರಾಸಾಯನಿಕ ತಜ್ಞರ ವರದಿ ಪಡೆದಿರುವುದಾಗಿ ನುಡಿದಿರುತ್ತಾರೆ. ಪಾಟೀ ಸವಾಲಿನಲ್ಲಿ ಈ ಸಾಕ್ಷಿ ನುಡಿಯುತ್ತಾ ಪ್ರಕರಣದಲ್ಲಿ ತನಿಖೆ ಸಮಯದಲ್ಲಿ ವಾಹನಕ್ಕೆ ಸಂಬಂಧಿಸಿದ್ದ "ಬಿ" ಅಬ್‌ಸ್ಟ್ರಾಕ್ಟ್‌ನ್ನು ಆರ್.ಟಿ.ಓ. ರವರಿಂದ ತರಿಸಿ ಪರಿಶೀಲಿಸಲಾಗಿ ವಾಹನದ ಮಾಲೀಕರು ಶ್ರೀ ಎಂ. ಅಬ್ದುಲ್ಲ ಬಿನ್: ಮಹಮ್ಮದ್ ಕುಂಞ್ಞಿ ಎಂದು ಗೊತ್ತಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ಪ್ರಕರಣದ ದಾಖಲೆಗಳನ್ನು ಈ ಪ್ರಕರಣಕ್ಕೆ ಪೂರಕವಾಗಿ ಸೃಷ್ಟಿ ಮಾಡಲಾಗಿದೆ ಎಂಬುದನ್ನು ಅಲ್ಲಗಳೆದಿರುತ್ತಾರೆ.

ಪ್ರಾ.ಸಾ. -3

ಶ್ರೀ ಸಿ. ಕೋಟಿ, ಅಬಕಾರಿ ರಕ್ಷಕ, ಬಂಟ್ವಾಳ ವಲಯ ಪಿಡಬ್ಲ್ಯೂ-3 ರವರು ದಿನಾಂಕ: 04.01.2003ರಂದು ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿ ಹೇಳಿಕೆಯಲ್ಲಿ 2 ಮಾದರಿ ಸೀಸೆಗಳನ್ನು ದಿನಾಂಕ:14.03.2002 ರಂದು ಅಬಕಾರಿ ನಿರೀಕ್ಷಕರಿಂದ ಪಡೆದುಕೊಂಡು ಅದೇ ದಿನ ಮಂಗಳೂರು ರಾಸಾಯನಿಕ ವಿಶ್ಲೇಷಣಾ ಕಛೇರಿಗೆ ತಲುಪಿಸಿದ್ದೇನೆಂದು ಮತ್ತು ದಿನಾಂಕ:07.06.2002ರಂದು ತಜ್ಞರು ಬಾಟಲುಗಳನ್ನು ಪರಿಶೀಲಿಸಿ ನಂತರ ವರದಿಯೊಂದಿಗೆ ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ ಎಂದು ನುಡಿದಿರುತ್ತಾರೆ. ಪಾಟೀ ಸವಾಲಿನಲ್ಲಿ ತಜ್ಞರು ನಿಡಿದ ವರದಿಯಲ್ಲಿ ಸದರಿ ಬಾಟಲಿಗಳನ್ನು ನಾನೇ ಕೊಂಡು ಹೋಗಿರುವುದರ ಬಗ್ಗೆ ಯಾವುದೇ ನಮೂದು ಇರುವುದಿಲ್ಲ. ಆದರೆ ಅಬಕಾರಿ ನಿರೀಕ್ಷಕರು ನೀಡಿದ ಪತ್ರದಲ್ಲಿ ತನ್ನ ರುಜು ಇದೆ ಎಂದು ನುಡಿದಿರುತ್ತಾರೆ.

ಈ ಪ್ರಕರಣದ ಅಭಿಯೋಜನ ಪರ ಸಾಕ್ಷಿದಾರರ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿಲ್ಲ ಮತ್ತು ಯಾದಾಸ್ತಿನಲ್ಲಿ ಸ್ವತಂತ್ರ ಸಾಕ್ಷಿದಾರರನ್ನು ಪಡೆದಿರುವುದಿಲ್ಲ. ಈ ಕಾರಣದಿಂದ ಒಂದನೇ ವಿವಾದಾಂಶವನ್ನು ನಕಾರಾತ್ಮಕವಾಗಿ ತೀರ್ಮಾನಿಸಲಾಗಿದೆ.

ಈ ಪ್ರಕರಣದ ವಾಹನದ ಮಾಲೀಕರಾದ ಶ್ರೀ ಎಂ. ಅಬ್ದುಲ್ಲ, ಬಿನ್: ಮಹಮ್ಮದ್ ಕುಂಜ್ಞಿ ಇವರ ಪರ ಡಿಡಬ್ಲ್ಯೂ-1 ಎಂದು ಶ್ರೀ ಅಬ್ಬೂಬಕ್ಕರ್ ಇವರು ಹಾಜರಿದ್ದು ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯು ದಿನಾಂಕ: 08.01.04ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯು ತಾನು ಜನರಲ್ ಪವರ್ ಆಫ್ ಅಟಾರ್ನಿ ಎಂದು ಹಾಜರಾಗಿ ಸಾಕ್ಷಿ ನುಡಿಯುತ್ತಿದ್ದ ಎಂಬುವುದಾಗಿ ಹೇಳಿಕೆ ನೀಡಿರುತ್ತಾರೆ. ತನ್ನ ಹೇಳಿಕೆಯಲ್ಲಿ ಸದರಿ ರಿಕ್ಷಾವನ್ನು ಮಹಮ್ಮದ್ ಇಕ್ಬಾಲ್ ಇವರಿಗೆ ಚಲಾಯಿಸಲು ನೀಡಿರುವುದಾಗಿ ಮತ್ತು ಸದರಿ ಮಹಮ್ಮದ್ ಇಕ್ಬಾಲ್‌ರವರಿಗೆ ಆಟೋ ರಿಕ್ಷಾದ ಖರ್ಚು ವೆಚ್ಚಗಳನ್ನು ಭರಿಸಿ, ದಿನಕ್ಕೆ 80 ರೂಪಾಯಿಯಂತೆ ನೀಡಿರುತ್ತಾರೆ. ತನ್ನ ರಿಕ್ಷಾವನ್ನು ದಿನಾಂಕ: 19.02.2002 ರಂದು ಅಬಕಾರಿ ಪೊಲೀಸ್‌ರವರು ವಶಪಡಿಸಿಕೊಂಡ ಬಗ್ಗೆ ತನಗೆ ತಿಳಿಯಿತು. ಸದರಿ ರಿಕ್ಷಾ ಪೊಲೀಸರು ವಶಪಡಿಸಿಕೊಂಡ ಬಗ್ಗೆ ತನ್ನ ಚಾಲಕ ತನಗೆ ತಿಳಿಸಿಲ್ಲವೆಂದು ತಾನು ದಿನಪತ್ರಿಕೆಯನ್ನು ನೋಡಿ ತನಗೆ ತಿಳಿಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ನಂತರ ವಕೀಲರ ಮೂಲಕ ಅರ್ಜಿ ಸಲ್ಲಿಸಿ ವಾಹನವನ್ನು ತಾನು ತಾತ್ಕಾಲಿಕ ನೆಲೆಯಲ್ಲಿ ಪಡೆದುಕೊಂಡಿರುತ್ತೇನೆ ಎಂದು ನುಡಿದಿರುತ್ತಾರೆ. ತನಗೆ ವಾಹನದಲ್ಲಿ ಮದ್ಯವನ್ನು ಸಾಗಾಟ ಮಾಡುವ ವಿಷಯ ತನಗೆ ಗೊತ್ತಿಲ್ಲವೆಂದು ನುಡಿದಿರುತ್ತಾರೆ. ಈ ಸಾಕ್ಷಿಯನ್ನು ಎ.ಡಿ.ಪಿಯವರು ಪಾಟೀ ಸವಾಲು ಮಾಡಿರುತ್ತಾರೆ. ಈ ಸಾಕ್ಷ್ಯಾಧಾರರ ಹೇಳಿಕೆಗಳನ್ನು ಪರಿಶೀಲಿಸಲಾಗಿ ತಾನು ವಶಪಡಿಸಿಕೊಂಡ ವಾಹನ ಆಟೋ ರಿಕ್ಷಾ ಸಂಖ್ಯೆ: ಕೆಎಲ್-14-ಸಿ-378 ರ ಮಾಲೀಕರಾದ ಶ್ರೀ ಎಂ. ಅಬ್ದುಲ್ಲ ಇವರ ಜಿ.ಪಿ.ಎ. ದಾರರು ಇದ್ದ ವಾಹನದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದು, ತನಗೆ ತಿಳಿಯದೇ ವಾಹನದ ಚಾಲಕನೇ ಈ ಕೃತ್ಯ ಎಸಗಿದ್ದಾನೆ ಎಂದು ನೀಡಿರುತ್ತೇನೆ.

ಈ ಪ್ರಕರಣದ ವಿಚಾರಣೆಯಲ್ಲಿ ಲಭ್ಯವಿದ್ದ ಸಾಕ್ಷಿದಾರರ ಹೇಳಿಕೆ ಮತ್ತು ದಾಖಲಾತಿಗಳನ್ನು ಪರಿಶೀಲಿಸಲಾಗಿ ಅಬಕಾರಿ ಅಧಿಕಾರಿಗಳು ವಾಹನವನ್ನು ವಶಪಡಿಸಿಕೊಂಡ ಸಮಯದಲ್ಲಿ ಅಬಕಾರಿ ಕಾನೂನಿನಂತೆ ಅನುಸರಿಸಬೇಕಾದ ಸರ್ಚ್ ವಾರೆಂಟ್ ಪಡೆದುಕೊಳ್ಳದೇ, ವಾಹನವನ್ನು ವಶಪಡಿಸಿಕೊಂಡಿದ್ದು ಕಂಡು ಬರುತ್ತದೆ ಮತ್ತು ನಿಶಾನೆ-2ರಲ್ಲಿ ನಮೂದಿಸಲಾದ ವಿಷಯಗಳು ಮತ್ತು ಪ್ರಮುಖ ಸಾಕ್ಷಿದಾರರು ಪಿಡಬ್ಲ್ಯೂ-1 ರವರ ಹೇಳಿಕೆಗಳು ಒಂದಕ್ಕೊಂದು ಪೂರಕವಾಗಿಲ್ಲ. ವಾಹನ ಮಾಲೀಕರ ಪರ ಸಾಕ್ಷಿ ಡಿಡಬ್ಲ್ಯೂ-1 ರವರ ಹೇಳಿಕೆಯನ್ನು ಪರಿಶೀಲಿಸಲಾಗಿ ವಶಪಡಿಸಿಕೊಂಡ ವಾಹನವು ಮಾಲೀಕರ ಗಮನಕ್ಕೆ ಬಾರದೇ ಅಕ್ರಮ ಸಾಗಾಣಿಕೆಗೆ ಉಪಯೋಗವಾಗಿದೆ ಎಂಬುದನ್ನು ಮಾಲೀಕರು ಸಿದ್ದಗೊಳಿಸಿರುತ್ತಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಫಿರ್ಯಾದುದಾರರು ಪ್ರಕರಣ ದಾಖಲಿಸಿರುವ ಸ್ಥಳ ಹಾಗೂ ಸಮಯದಂತೆ ಸ್ವತಂತ್ರ ಸಾಕ್ಷಾಧಾರರನ್ನು ಪಡೆಯಲು ಅವಶ್ಯವಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿ ತಯಾರಿಸಿರುವ ಸ್ಥಳ ಮಹಜರಿಗೆ ಯಾರೊಬ್ಬರು ಪಂಚರ ಸಾಕ್ಷಿದಾರರನ್ನು ಪಡೆಯದೇ ಇರುವುದು ಪ್ರಕರಣ ಎಸಗಿರುವ ಬಗ್ಗೆ ಸಂಶಯಕ್ಕೆ ಆಸ್ಪದ ಉಂಟು ಮಾಡಿರುತ್ತದೆ. ಅಲ್ಲದೇ ಪ್ರಕರಣ ಸಂದರ್ಭದಲ್ಲಿ ಸದರಿ ವಾಹನದಲ್ಲಿ ಇಬ್ಬರು ವ್ಯಕ್ತಿಗಳು ಎ-1 ಮಹಮ್ಮದ್ ಇಕ್ಬಾಲ್ ಚಾಲಕನಾಗಿದ್ದು, ಎ-2 ರಮೇಶ್ ಶೆಟ್ಟಿ ಎಂಬುವನು ರಿಕ್ಷಾದಲ್ಲಿ ಪ್ರಯಾಣಿಸುತ್ತಿದ್ದು, ಫಿರ್ಯಾದುದಾರರು ಮಹಜರು ಜರುಗಿಸಿ ವಶಪಡಿಸಿಕೊಂಡಿರುವ ಮದ್ಯಗಳು ಚಾಲಕನಿಗೆ ಸಂಬಂಧಿಸಿರುವ ಅಥವಾ ರಿಕ್ಷಾದಲ್ಲಿ ಪ್ರಯಾಣಿಸುತ್ತಿದ್ದ ಇನ್ನೊಬ್ಬ ವ್ಯಕ್ತಿ ಎ-2 ಸಂಬಂಧಿಸಿದೆ ಎಂಬುವುದರ ಬಗ್ಗೆ ಪುರಾವೆಗಳನ್ನು ಒದಗಿಸಿರುವುದಿಲ್ಲ. ಆದುದರಿಂದ ಸದರಿ ಅಕ್ರಮ ಸೊತ್ತುಗಳು ಅಪರಾಧ ಸ್ಥಳ ಹಾಗೂ ಸಂದರ್ಭದಲ್ಲಿ ಚಾಲಕನಿಗೆ ಸಂಬಂಧಿಸಿದ ಅಥವಾ ರಿಕ್ಷಾದಲ್ಲಿ ಪ್ರಯಾಣಿಸುತ್ತಿದ್ದ ಎ-2 ವ್ಯಕ್ತಿಗೆ ಸಂಬಂಧಿಸಿದ ಸೊತ್ತುಗಳು ಎಂಬುವುದಾಗಿ ನಿರ್ಣಯಕ್ಕೆ ಬರಲು ಸಂಶಯ ಉಂಟು ಮಾಡಿರುತ್ತಾರೆ. ಅಲ್ಲದೇ ಫಿರ್ಯಾದುದಾರರು ಅಪರಾಧಕ್ಕೆ ಸಂಬಂಧಿಸಿದ ಸದರಿ ವಾಹನದ ಆರ್.ಸಿ. ಮಾಲೀಕರನ್ನು ಗುರುತಿಸಿ ಪ್ರಕರಣಕ್ಕೆ ಸಂಬಂಧಿಸಿ ದಸ್ತಗಿರಿ ಮಾಡಲು ಯಾವುದೇ ಪ್ರಯತ್ನ ಮಾಡಿರುವುದು ದಾಖಲೆಗಳನ್ನು ಪರಿಶೀಲಿಸಿರುವ ಪ್ರಾಧಿಕಾರಕ್ಕೆ ಲಭ್ಯವಿರುವುದಿಲ್ಲ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಸದರಿ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಅಪರಾಧವನ್ನು ಮಾಡುವ ಬಗ್ಗೆ ವಾಹನ ಬಳಸಿರುವ ಬಗ್ಗೆ ಫಿರ್ಯಾದುದಾರರು ಯಾವುದೇ ಪುರಾವೆಗಳನ್ನು ಪ್ರಾಧಿಕಾರಕ್ಕೆ ನೀಡಲು ವಿಫಲರಾಗಿರುತ್ತಾರೆ. ಮೇಲಿನ ಅಂಶಗಳನ್ನು ಪರಿಗಣಿಸಿ ಪ್ರಾಧಿಕಾರವು ಈ ಕೆಳಗಿನ ತೀರ್ಮಾನಕ್ಕೆ ಬಂದಿರುತ್ತದೆ.

1) ದಿನಾಂಕ: 19.02.2002ರಂದು ವಾಹನ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎಲ್-14-ಸಿ-378ರಲ್ಲಿ ಅಕ್ರಮವಾಗಿ ಮದ್ಯ ಸಾಗಣೆ ಮಾಡಲಾಗಿತ್ತೇ? -ಹೌದು-
2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? -ಹೌದು-
3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ? -ಇಲ್ಲ-

**ಆದೇಶ**

ಶ್ರೀ ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43ಬಿ ನಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳರವರ ಮೊಕದ್ದಮೆ ಸಂಖ್ಯೆ: 30/2001-02 ದಿನಾಂಕ: 19.02.2002ರಲ್ಲಿ ಜಪ್ತುಪಡಿಸಿಕೊಂಡಿರುವ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎಲ್-14-ಸಿ-378ನ್ನು ನಿಯಮ 43ಎ (2) ರನ್ವಯ ಈ ಪ್ರಾಧಿಕಾರ ದಿನಾಂಕ: 08.05.2002ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ, ಸದರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀ ಎಂ. ಅಬ್ದುಲ್ಲ, ಬಿನ್: ಮಹಮ್ಮದ್ ಕುಂಜ್ಞಿ, ವರ್ಕಾಡಿ ಪೋಸ್ಟ್ ಅಂಡ್ ವಿಲೇಜ್, ಕಾಸರಗೋಡು ಇವರ ಜಿ.ಪಿ.ಎ. ದಾರರಾದ

ಶ್ರೀ ಅಬ್ಬೂಬಕ್ಕರ್ ಬಿನ್: ಇಸ್ಮಾಯಿಲ್, ನೀಡಿಬೈಲ್ ಹೌಸ್, ಕಡಂಬೂರು ಪೋಸ್ಟ್ ಮಂಜೇಶ್ವರ, ಕಾಸರಗೋಡು ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶಿಸಿದೆ. ಸದರಿ ಆರ್.ಸಿ. ಮಾಲೀಕರು ಪ್ರಾಧಿಕಾರಕ್ಕೆ ನೀಡಲಾಗಿರುವ ರೂ. 50,000/- ಮೊತ್ತದ ಬ್ಯಾಂಕ್ ಗ್ಯಾರಂಟಿಯನ್ನು ಆರ್.ಸಿ. ಮಾಲೀಕರ ಜಿ.ಪಿ.ಎ. ದಾರರ ಪರ ಹಿಂತಿರುಗಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 24.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1 - ಶ್ರೀ ರವೀಂದ್ರ ಕೋಟೆಕಾರ್, ಅಬಕಾರಿ ನಿರೀಕ್ಷಕರು, ಕುಂದಾಪುರ ವಲಯ, ಕುಂದಾಪುರ.
ಪ್ರಾ.ಸಾ.2 - ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ.
ಪ್ರಾ.ಸಾ. 3- ಶ್ರೀ ಸಿ. ಕೋಟಿ, ಅಬಕಾರಿ ರಕ್ಷಕ, ಬಂಟ್ವಾಳ ವಲಯ, ಬಂಟ್ವಾಳ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - 43ಎ ಅಡಿಯಲ್ಲಿ ಸಲ್ಲಿಸಿದ ವರದಿ.
ನಿಶಾನೆ ಪಿ-2 - ಯಾದಾಸ್ತಿನ ಛಾಯಾ ಪ್ರತಿ.
ನಿಶಾನೆ ಪಿ-3 - ಪ್ರಥಮ ಮಾಹಿತಿ ವರದಿಯ ಛಾಯಾ ಪ್ರತಿ.
ನಿಶಾನೆ ಪಿ-4 - ದಿನಾಂಕ: 13.11.2003 ರಂದು ಸಲ್ಲಿಸಿದ ಕೆಮಿಕಲ್ಸ್ ವರದಿ.
ನಿಶಾನೆ ಪಿ-5 - ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ವರದಿ.

**ಅನುಬಂಧ-3**

**ಫಿರ್ಯಾದುದಾರರ ಪರ ಮಂಡಿಸಲಾದ ಸೊತ್ತುಗಳು:**

ಡಿಡಬ್ಲ್ಯೂ-1 - ಅರ್ಜಿದಾರರ ಹೇಳಿಕೆ- ಶ್ರೀ ಅಬ್ಬೂಬಕ್ಕರ್ ಆರ್.ಸಿ. ಮಾಲೀಕ.

**ಅನುಬಂಧ-4**

ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು- ಇಲ್ಲ.

**ಅನುಬಂಧ-5**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1700

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/ 4/ ಡಿಟಿಸಿಆರ್/ 2001-2002, ದಿನಾಂಕ: 24ನೇ ನವೆಂಬರ್, 2004**

**ಉಪಸ್ಥಿತರು:** ಎನ್.ಎಂ. ಹುಸೇನ್
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಅಬಕಾರಿ ಉಪ ನಿರೀಕ್ಷಕರು,
ಬೆಳ್ತಂಗಡಿ ಉಪ ವಲಯ,
ಬೆಳ್ತಂಗಡಿ.

**ವಿರುದ್ಧ**

**ಆರೋಪಿಗಳು**
1) ಶ್ರೀ ರಾಮಣ್ಣ ಗುಡಿಗಾರ, ಬಿನ್: ದಿ. ಚೆನ್ನಪ್ಪ ಗುಡಿಗಾರ.
ರಾಮನಿವಾಸ, ಕನ್ಯಾಡಿ-II, ಧರ್ಮಸ್ಥಳ ಪೋಸ್ಟ್,
ಬೆಳ್ತಂಗಡಿ ತಾಲ್ಲೂಕು.

**ಅರ್ಜಿದಾರರು:**
ಶ್ರೀ ರಾಮಣ್ಣ ಗುಡಿಗಾರ, ಬಿನ್ ದಿ. ಚೆನ್ನಪ್ಪ ಗುಡಿಗಾರ.
ರಾಮನಿವಾಸ, ಕನ್ಯಾಡಿ-II, ಧರ್ಮಸ್ಥಳ ಪೋಸ್ಟ್,
ಬೆಳ್ತಂಗಡಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:07.07.2001 ರಂದು ಅಬಕಾರಿ ಉಪ ನಿರೀಕ್ಷಕರು, ಬೆಳ್ತಂಗಡಿ ಉಪ ವಲಯ, ಬೆಳ್ತಂಗಡಿ ಇವರು ತಮ್ಮ ಸಿಬ್ಬಂದಿಯವರೊಂದಿಗೆ ಉಜಿರೆ ಧರ್ಮಸ್ಥಳ ರಸ್ತೆಯ ಸಿದ್ದವನ ಗುರುಗುಲ ಮುಂಭಾಗದಲ್ಲಿ ಅಪರಾಹ್ನ ಸುಮಾರು 2.45 ಗಂಟೆಗೆ ರಸ್ತೆ ಗಾವಲು ನಡೆಸುತ್ತಿದ್ದಾಗ, ಉಜಿರೆ ಕಡೆಯಿಂದ ಒಂದು ಆಟೋರಿಕ್ಷಾ ಬರುತ್ತಿರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ ಅದು ಸುಮಾರು 5 ಗಜ ದೂರದಲ್ಲಿ ನಿಲ್ಲಿಸಿದ್ದು, ಆ ಬಳಿಕ ರಿಕ್ಷಾದ ಬಳಿ ಹೋಗಿ, ಸದರಿ ರಿಕ್ಷಾವನ್ನು ಶೋಧಿಸಿದಾಗ ಅದರ ಹಿಂಬದಿಯ ಸೀಟಿನ ಮೇಲೆ 2 ರಟ್ಟಿನ ಪೆಟ್ಟಿಗೆಗಳು ಇದ್ದು ಸದರಿ ಪೆಟ್ಟಿಗೆಯ ಮುಚ್ಚಳಗಳನ್ನು ತೆರೆದು ನೋಡಿದಾಗ, ಅದರಲ್ಲಿ ಮದ್ಯ ತುಂಬಿದ ಸೀಸೆಗಳು ಇರುವುದು ಕಂಡು ಬಂತು. ಅವುಗಳ ವಿವರ ಈ ಕೆಳಗಿನಂತಿವೆ.

1. ಒರಿಜಿನಲ್ ಚಾಯ್ಸ್ ಡಿಲಕ್ಸ್ ವಿಸ್ಕಿ-180 ಎಂಎಲ್‌ನ 48 ಬಾಟ್ಲಿ-1 ಪೆಟ್ಟಿಗೆ-8.640 ಲೀಟರು.
2. ಒರಿಜಿನಲ್ ಕೋಕೊನೆಟ್ ಫೆನ್ನಿ-180 ಎಂಎಲ್‌ನ 48 ಬಾಟ್ಲಿ-1 ಪೆಟ್ಟಿಗೆ-8.640 ಲೀಟರು.

ಮದ್ಯ ಸಾಗಾಣಿಕೆ ಮಾಡಲು ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445 ಆಗಿದ್ದು ಇದು ಪೆಟ್ರೋಲ್ ಚಾಲಿತ ಆಟೋ ರಿಕ್ಷಾವಾಗಿರುತ್ತದೆ. ಇದರ ಇಂಜಿನ್ ನಂಬರ್ ಪರಿಶೀಲಿಸಲಾಗಿ, 24 ಎಂಬಿಡಿಎ: 95125 ಆಗಿರುತ್ತದೆ. ಸದರಿ ರಿಕ್ಷಾದಲ್ಲಿ ಚಾಲಕನಲ್ಲಿ ಮದ್ಯದ ಬಗ್ಗೆ ಬಿಲ್ಲು ಮತ್ತು ಮದ್ಯವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರವಿದೆಯೇ ಎಂದು ವಿಚಾರಿಸಿದಾಗ ತನ್ನ ಬಳಿ ಯಾವುದೇ ದಾಖಲೆಗಳು ಇಲ್ಲವೆಂದು ತಿಳಿಸಿರುತ್ತಾನೆ. ತಾನು ಮಾರಾಟಕ್ಕೋಸ್ಕರ ತಂದಿರುವುದು ಮತ್ತು ಆತನ ಹೆಸರು ವಿಳಾಸ ವಿಚಾರಿಸಿದಾಗ ತಾನು ರಾಮಣ್ಣ ಗುಡಿಗಾರ ಬಿನ್: ದಿವಂಗತ ಚೆನ್ನಪ್ಪ ಗುಡಿಗಾರ ಕನ್ಯಾಡಿ ರಾಮ ನಿವಾಸ, ಧರ್ಮಸ್ಥಳ ಬೆಳ್ತಂಗಡಿ ಎಂದು ತಿಳಿಸಿರುತ್ತಾನೆ. ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ಯಾವುದೇ ರಹದಾರಿ ಪತ್ರವನ್ನು ಹಾಜರು ಪಡಿಸದ ಕಾರಣ ಇದು ತೆರಿಗೆ ರಹಿತ ಮದ್ಯವೆಂದು ಖಚಿತವಾಗಿರುವುದರಿಂದ ಸ್ಥಳಿಯ ಪಂಚರನ್ನು ಪಡೆಯಲು ಪ್ರಯತ್ನಿಸಿದ್ದು, ಯಾರೂ ದೊರಕದ ಬಳಿಕ ಪ್ರತಿ ಪೆಟ್ಟಿಗೆಯಿಂದ ಒಂದೊಂದು ಸೀಸೆಯಂತೆ ಒಟ್ಟು 2 ಸೀಸೆಗಳನ್ನು ರಾಸಾಯನಿಕವಾಗಿ ಪರೀಕ್ಷೆಗಾಗಿ ಮಾದರಿಯಾಗಿ ತೆಗೆದು ಮುಚ್ಚಳಿಕೆ ಬಟ್ಟೆ ದಾರ ಕಟ್ಟಿ ಅರಗಿನಿಂದ ಇಲಾಖೆಯ ಸೀಲು ಮಾಡಿರುತ್ತಾರೆ. ನಂತರ ಪಂಚರ ಸಹಿವುಳ್ಳ ಚೀಟಿಯನ್ನು ತಯಾರಿಸಿ ಸೀಸೆಗಳಿಗೆ ಹಾಗೂ ರಟ್ಟಿನ ಪೆಟ್ಟಿಗೆಗಳಿಗೆ ಅಂಟಿಸಿರುತ್ತಾರೆ. ಮಾದರಿ ಸೀಲನ್ನು ತಯಾರಿಸಿ ಸಹಿಯನ್ನು ಪಡೆದಿರುತ್ತಾರೆ. ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಯ ವಿರುದ್ಧ ಮೊಕದ್ದಮೆ ಸಂಖ್ಯೆ: 1/2001-02 ದಿನಾಂಕ: 07.07.2001ರಂದು ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ರಾಮಣ್ಣ ಗುಡಿಗಾರರವರು ತಮ್ಮ ವಕೀಲರ ಮೂಲಕ ದಿನಾಂಕ: 17.07.2001 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ತನ್ನ ರಿಕ್ಷಾದಲ್ಲಿ ಯಾವುದೇ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದಿಲ್ಲ. ತನ್ನ ಮೇಲೆ ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತಾರೆ. ತಾನು ಬಡವನಾಗಿದ್ದು, ಈ ಆಟೋರಿಕ್ಷಾದಿಂದ ಬರುವ ಆದಾಯ ಬಿಟ್ಟರೆ ಕುಟುಂಬಕ್ಕೆ ಬೇರೆ ಯಾವುದೇ ಆದಾಯವಿರುವುದಿಲ್ಲವೆಂದು ಅರ್ಜಿ ಸಲ್ಲಿಸಿರುವುದರಿಂದ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ:4:ಡಿಟಿಸಿಆರ್: 2001-02 ದಿನಾಂಕ: 25.08.2001ರಲ್ಲಿ ಪ್ರಕರಣದ ವಿಚಾರಣೆಯಾಗಿ ಮುಟ್ಟುಗೋಲು ನಡವಳಿ ಅಂತಿಮವಾಗಿ ಇತ್ಯರ್ಥವಾಗಲು ವಿಳಂಬವಾಗಿರುವುದರಿಂದ ಈ ಪ್ರಾಧಿಕಾರವು ವಿಧಿಸಿದ ಷರತ್ತುಗಳಿಗೆ ಬದ್ಧರಾಗಿ ಆಟೋ ರಿಕ್ಷಾದ ಮೌಲ್ಯಕ್ಕೆ ಅನುಗುಣವಾಗಿ ಷರತ್ತಿಲ್ಲದ ರೂ. 30,000 ದ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ವಶಪಡಿಸಿಕೊಂಡ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ನ್ನು ತಾತ್ಕಾಲಿಕ ನೆಲೆಯಲ್ಲಿ ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಲು ಆದೇಶಿಸಿದೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರಕ್ಕೆ ಯಾರು ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ ವಶಪಡಿಸಿಕೊಂಡ 17.280 ಲೀಟರು ಮದ್ಯವನ್ನು ದಿನಾಂಕ: 11.09.01ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ. ವಾಹನ ಮಾಲೀಕರಾದ ಶ್ರೀ ರಾಮಣ್ಣ ಗುಡಿಗಾರರವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 11.09.2001ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು, ಕಾರಣ ಕೇಳಿ ನೋಟೀಸಿಗೆ ಉತ್ತರವನ್ನು ನೀಡಿರುತ್ತಾರೆ.

ಈ ಪ್ರಕರಣದಲ್ಲಿ ವಿಚಾರಣೆ ಕೈಗೊಂಡು ಅಭಿಯೋಜನ ಪರ ಸಾಕ್ಷಿದಾರರಿಗೆ ನೋಟೀಸು ನೀಡಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸಾಕ್ಷಿ ನುಡಿಯಲು ತಿಳಿಸಲಾಯಿತು. ಅಭಿಯೋಜನ ಪರವಾಗಿ ಒಟ್ಟು ಪಿಡಬ್ಲ್ಯೂ-1 ರಿಂದ ಪಿಡಬ್ಲ್ಯೂ-2 ಎಂದು ಮತ್ತು ಪ್ರತಿರಕ್ಷಾ ಪರವಾಗಿ ಡಿಡಬ್ಲ್ಯೂ-1 ಎಂದು ಸಾಕ್ಷ್ಯಾಧಾರರನ್ನು ಹಾಜರುಪಡಿಸಲಾಗಿದೆ. ಅಭಿಯೋಜನ ಪರವಾಗಿ ನಿಶಾನೆ ಪಿ-1 ರಿಂದ ನಿಶಾನೆ ಪಿ-4ರ ವರೆಗೆ ಇರುವ ದಾಖಲಾತಿಗಳನ್ನು ಹಾಜರುಪಡಿಸಲಾಗಿದೆ. ಈ ಪ್ರಕರಣದಲ್ಲಿ ಅಭಿಯೋಜನ ಪರ ದಾಖಲೆಗಳನ್ನು ಮತ್ತು ವಾಹನದ ಮಾಲೀಕರು ಸಲ್ಲಿಸಿದ ಅರ್ಜಿ ಮತ್ತು ಅವರ ಪರ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ವಿವಿಧಾಂಶಗಳನ್ನು ತೀರ್ಮಾನಿಸುವುದು ಅವಶ್ಯವಾಗಿರುತ್ತದೆ.

1) ದಿನಾಂಕ: 07.07.2001ರಂದು ವಾಹನ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ರಲ್ಲಿ ಅಕ್ರಮವಾಗಿ 2 ಪೆಟ್ಟಿಗೆಗಳಲ್ಲಿ 17.280 ಲೀಟರು ಮದ್ಯ ಸಾಗಾಣಿಕೆ ಮಾಡಲಾಗಿತ್ತೇ?
2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?
3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ವಿವಿಧಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲಾತಿಗಳ ಆಧಾರದ ಮೇಲೆ ಈ ಕೆಳಗಿನಂತೆ ತೀರ್ಮಾನಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

ಈ ಪ್ರಕರಣದಲ್ಲಿ ಅಭಿಯೋಜನ ಪರ ಒಟ್ಟು ಪಿಡಬ್ಲ್ಯೂ-1 ರಿಂದ ಪಿಡಬ್ಲ್ಯೂ-2 ಎಂದು ವಿಚಾರಿಸಲಾಗಿದೆ.

**ಪ್ರಾ.ಸಾ. -1**

ಶ್ರೀ ರತ್ನಾಕರ್ ಪಿ. ಅಬಕಾರಿ ರಕ್ಷಕ, ವೇಣೂರು ಉಪ ವಲಯರವರು ಈ ಪ್ರಾಧಿಕಾರದ ಮುಂದೆ ದಿನಾಂಕ:06.11.2003 ರಂದು ಹಾಜರಾಗಿ ಇವರನ್ನು ಪಿಡಬ್ಲ್ಯೂ-1 ಎಂದು ಸಾಕ್ಷಿ ನೀಡಿರುತ್ತಾರೆ. ದಿನಾಂಕ: 10.07.2001ರಂದು ಅಬಕಾರಿ ಉಪ ನಿರೀಕ್ಷಕರು, ಬೆಳ್ತಂಗಡಿ ಇವರು ನೀಡಿದ 180 ಎಂಎಲ್‌ನ 2 ಮಾದರಿ ಸೀಸೆಗಳನ್ನು ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪಡೆದುಕೊಂಡು ಮಂಗಳೂರು ರಾಸಾಯನಿಕ ತಜ್ಞರಿಗೆ ಅದೇ ದಿನ ತಲುಪಿಸಿರುತ್ತೇನೆ. ದಿನಾಂಕ: 03.09.2001 ರಂದು ರಾಸಾಯನಿಕ ತಜ್ಞರು ಪರೀಕ್ಷಿಸಿದ 2 ಮಾದರಿ ಸೀಸೆಗಳನ್ನು ಮತ್ತು ಅವರು ನೀಡಿದ ವರದಿಯನ್ನು ಅಬಕಾರಿ ಉಪ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ರಾಸಾಯನಿಕ ತಜ್ಞರು ನೀಡಿದ ವರದಿಯ ಛಾಯಾ ಪ್ರತಿಯನ್ನು ಅರ್ಜಿದಾರರ ಪರ ವಕೀಲರ ಆಕ್ಷೇಪಣಾ ಮೇರೆಗೆ ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಪಾಟೀ ಸವಾಲಿನಲ್ಲಿ ಈ ಸಾಕ್ಷಿಯು ನುಡಿಯುತ್ತ ನಿಶಾನೆ ಪಿ-1ನ್ನು ತನ್ನ ಮೂಲಕ ಕಳುಹಿಸಿದ್ದಾರೆ ಎನ್ನುವುದಕ್ಕೆ ಯಾವುದೇ ದಾಖಲೆಗಳ ಗುರುತು ಇರುವುದಿಲ್ಲ ಎಂದು ನುಡಿದಿರುತ್ತಾರೆ.

**ಪ್ರಾ.ಸಾ. -2**

ಶ್ರೀ ಬಿ. ಜಯ, ನಿವೃತ್ತ ಅಬಕಾರಿ ಉಪ ನಿರೀಕ್ಷಕರು, ಬೆಳ್ತಂಗಡಿ ಉಪ ವಲಯರವರು ಈ ಮೊಕದ್ದಮೆಗೆ ಸಂಬಂಧಿಸಿ ದಿನಾಂಕ: 18.11.2003 ರಂದು ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಇವರನ್ನು ಪಿಡಬ್ಲ್ಯೂ-2 ಎಂದು ಸಾಕ್ಷಿ ಮಾಡಲಾಯಿತು. ತಾನು ದಿನಾಂಕ: 07.07.2001ರಂದು ಅಪರಾಹ್ನ 2.45 ಗಂಟೆಗೆ ಬೆಳ್ತಂಗಡಿ ತಾಲ್ಲೂಕಿನ ಉಜಿರೆ ಧರ್ಮಸ್ಥಳ ರಸ್ತೆಯಲ್ಲಿರುವ ಸಿದ್ದವನ ಗುರುಕುಲ ಇದರ ಮುಂಭಾಗದಲ್ಲಿ ಅಕ್ರಮ ಮದ್ಯ ಸಾಗಾಟದ ಬಗ್ಗೆ ತನ್ನ ಸಿಬ್ಬಂದಿಯವರೊಂದಿಗೆ ರಸ್ತೆ ಗಾವಲು ನಡೆಸುತ್ತಿರುವಾಗ ಉಜಿರೆ ಕಡೆಯಿಂದ ಧರ್ಮಸ್ಥಳದ ಕಡೆಗೆ ಹೋಗುತ್ತಿದ್ದ ಆಟೋ ರಿಕ್ಷಾವನ್ನು ನಿಲ್ಲಿಸಲು ಸೂಚನೆ ನೀಡಿದಾಗ ಅದು 5 ಗಜ ದೂರದಲ್ಲಿ ನಿಲ್ಲಿಸಿದ್ದು ಆ ಬಳಿಕ ಸದರಿ ಆಟೋ ರಿಕ್ಷಾವನ್ನು ಶೋಧನೆ ನಡೆಸಿದ್ದಾಗ ಅದರಲ್ಲಿ ಒರಿಜಿನಲ್ ಚಾಯ್ಸ್ ವಿಸ್ಕಿಯ 180 ಎಂಎಲ್ ನ 48 ಸೀಸೆಗಳು ಮತ್ತು ಒರಿಜಿನಲ್ ಕೋಕೋನೆಟ್ ಫೆನ್ನಿ 180 ಎಂಎಲ್‌ನ 48 ಸೀಸೆಗಳು

ಇರುವುದು ಕಂಡು ಬಂತು. ಈ ಬಗ್ಗೆ ರಹದಾರಿ ಪತ್ರವನ್ನು ವಿಚಾರಿಸಿದಾಗ ತನ್ನ ಬಳಿ ಯಾವುದು ಇಲ್ಲವೆಂದು ತಿಳಿಸಿರುತ್ತಾನೆ. ಆತನ ಹೆಸರು ವಿಳಾಸ ವಿಚಾರಿಸಿದಾಗ ತಾನು ರಾಮಣ್ಣ ಗುಡಿಗಾರ ಬಿನ್ ಚೆನ್ನಪ್ಪ ಗುಡಿಗಾರ, ಕನ್ಯಾಡಿ-ಧರ್ಮಸ್ಥಳ ಗ್ರಾಮ, ಬೆಳ್ತಂಗಡಿ ಎಂದು ತಿಳಿಸಿರುತ್ತಾನೆ. ಈ ಬಗ್ಗೆ ಸ್ಥಳೀಯ ಸಾಕ್ಷಿಗಳನ್ನು ಪ್ರಯತ್ನಿಸಲಾಗಿದ್ದು, ಯಾರು ದೊರಕದ ಪ್ರಯುಕ್ತ ಸದರಿ ಪೆಟ್ಟಿಗೆಯಿಂದ 180 ಎಂಎಲ್‌ನ 2 ಸೀಸೆಗಳನ್ನು ತೆಗೆದು ಅದರ ಮುಚ್ಚಳಕ್ಕೆ ಬಟ್ಟೆ ದಾರದಿಂದ ಕಟ್ಟಿ ಅರಗಿನಿಂದ ಇಲಾಖಾ ಸೀಲು ಮಾಡಿರುತ್ತಾರೆ ಮತ್ತು ಗುರುತಿನ ಚೀಟಿಯನ್ನು ಅಂಟಿಸಿರುತ್ತಾರೆ. ಸದರಿ ಚೀಟಿಗಳಿಗೆ ಸಾಕ್ಷಿದಾರರ ಸಹಿ ಪಡೆದುಕೊಳ್ಳಲಾಯಿತು. ನಂತರ ಮದ್ಯ ಹಾಗೂ ವಾಹನವನ್ನು ಸರ್ಕಾರದ ವಶಕ್ಕೆ ತೆಗೆದುಕೊಂಡು ಕಛೇರಿಗೆ ತಂದು ಬರಲಾಯಿತು. ಈ ಬಗ್ಗೆ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಮೊಕದ್ದಮೆ ಸಂಖ್ಯೆ: 1/2001-02 ದಿನಾಂಕ: 07.07.2001ರಂದು ಮೊಕದ್ದಮೆ ದಾಖಲಿಸಿ ವರದಿಯನ್ನು ಮಾನ್ಯ ನ್ಯಾಯಲಯಕ್ಕೂ ಹಾಗೂ ಅಬಕಾರಿ ಅಧೀಕ್ಷಕರಿಗೆ ಸಲ್ಲಿಸಿರುತ್ತೇನೆ ಎಂದು ನುಡಿದಿರುತ್ತಾರೆ. ಬಳಿಕ ದಿನಾಂಕ: 19.07.2001ರಂದು ಶ್ರೀ ಪಿ. ರತ್ನಾಕರ್ ಅಬಕಾರಿ ರಕ್ಷಕರವರ ಮುಖಾಂತರ ಕೋರಿಕೆ ಪತ್ರ ಮಾದರಿ ಸೀಲು ಹಾಗೂ ರಾಸಾಯನಿಕ ವಿಶ್ಲೇಷಣೆಗೆ ತೆಗೆದಿರುವ ಸೀಸೆಗಳನ್ನು ರಾಸಾಯನಿಕ ತಜ್ಞರಿಗೆ ಸಲ್ಲಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ. ಪ್ರಥಮ ಮಾಹಿತಿಯ ವರದಿಯ ಛಾಯಾ ಪ್ರತಿಯನ್ನು ನಿಶಾನೆ ಪಿ-2 ಎಂದು ಮತ್ತು ಯಾದಾಸ್ತಿನ ಛಾಯಾ ಪ್ರತಿಯನ್ನು ನಿಶಾನೆ ಪಿ-3 ಎಂದು ಮತ್ತು ವಶಪಡಿಸಿಕೊಂಡ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿ ಸಲ್ಲಿಸಿರುವ ವರದಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಈ ಸಾಕ್ಷಿದಾರರನ್ನು ವಾಹನ ಮಾಲೀಕರ ಪರ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ತನ್ನ ಪಾಟೀ ಸವಾಲಿನಲ್ಲಿ ಉತ್ತರಿಸುತ್ತಾ ಠಾಣೆಯಿಂದ ನೇರವಾಗಿ ತಕ್ಷೀರು ಸ್ಥಳಕ್ಕೆ ಹೋದೆವು. ತಕ್ಷೀರು ಸ್ಥಳವು ಮುಖ್ಯ ರಸ್ತೆಯಾಗಿರುತ್ತದೆ. ಸದರಿ ತಕ್ಷೀರು ಸ್ಥಳದಲ್ಲಿ ವಾಹನ ಸಂಚಾರವಿರುತ್ತದೆ. ಆಟೋ ರಿಕ್ಷಾವನ್ನು ತಪಾಸಣೆ ಮಾಡುವ ಮೊದಲು ಬೇರೆ ವಾಹನಗಳನ್ನು ತಪಾಸಣೆ ಮಾಡಿರುತ್ತೇನೆ. ವಾಹನವನ್ನು ತಪಾಸಣೆ ಮಾಡುವ ಮೊದಲು ಜೆ.ಎಂ.ಎಫ್.ಸಿ. ನ್ಯಾಯಾಲಯದಿಂದ ವಾರೆಂಟನ್ನು ಪಡೆದಿರುವುದಿಲ್ಲ. ಜೆ.ಎಂ.ಎಫ್.ಸಿ. ನ್ಯಾಯಾಲಯದಿಂದ ವಾರೆಂಟು ಪಡೆಯದೇ ಇದ್ದುದಕ್ಕೆ ಕಾರಣಗಳನ್ನು ನಮೂದಿಸಿ ಒಂದು ಮೆಮೋವನ್ನು ತಯಾರಿಸಿರುತ್ತೇನೆ. ಸದರಿ ಮೆಮೋದ ಮೂಲ ಪ್ರತಿ ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಈ ಪ್ರಾಧಿಕಾರದ ಮುಂದೆ ಸಲ್ಲಿಸಿದ ದಾಖಲೆ ಪತ್ರಗಳಲ್ಲಿ ಸದರಿ ಮೆಮೋ ಇರುವುದಿಲ್ಲ. ಹಾಗೂ ಸದರಿ ಮೆಮೋದ ಕುರಿತು ಯಾದಾಸ್ತಿನಲ್ಲಿ ಯಾವುದೇ ನಮೂದು ಮಾಡಿರುವುದಿಲ್ಲ. ಆಟೋ ರಿಕ್ಷಾವನ್ನು ವಶಪಡಿಸುವ ಸಂದರ್ಭದಲ್ಲಿ ವಾಹನ ಚಾಲಕ ಓಡಲು ಪ್ರಯತ್ನಿಸಿಲ್ಲ, ಯಾದಾಸ್ತಿಗೆ ಸಹಿ ಮಾಡಿದ ಸಾಕ್ಷಿದಾರರನ್ನು ಮೊದಲು ತಮ್ಮ ಕಛೇರಿಗೆ ಕರೆಯಿಸಿ ತಕ್ಷೀರು ಸ್ಥಳಕ್ಕೆ ಕರೆದುಕೊಂಡು ಹೋಗಿರುತ್ತೇನೆ. ಸ್ಥಳೀಯ ಪಂಚರು ಯಾರು ದೊರಕಿರುವುದಿಲ್ಲ. ಬೆಳ್ತಂಗಡಿ ಎಕ್ಸೈಜ್ ಕಾಂಟ್ರಾಕ್ಟರು ಹರೀಶ್ ಎಂಬುವರು ಇವರನ್ನು ನೋಡಿದ ಪರಿಚಯವಿರುತ್ತದೆ. ಹರೀಶ್‌ರವರಿಗೆ ಸಂಬಂಧಿಸಿದ ವ್ಯಕ್ತಿಗಳು ಕೆಲವು ಲೈಸನ್ಸ್ ಇಲ್ಲದ ಅಬಕಾರಿ ಸೊತ್ತುಗಳನ್ನು ಸಾಗಾಟ ಮಾಡಲು ಆರೋಪಿಯವರನ್ನು ಕೇಳಿದರೇ ಎಂದರೆ ಸರಿಯಲ್ಲ. ಅದಕ್ಕೆ ಆರೋಪಿ ಒಪ್ಪಲಿಲ್ಲವೆಂದರೆ ಸರಿಯಲ್ಲ. ಈ ಕಾರಣದಿಂದ ಹರೀಶ್ ಇವರು ಅರ್ಜಿದಾರರ ಮೇಲೆ ಪ್ರಭಾವ ಬೀರಿ ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ ಎಂದರೆ ಸರಿಯಲ್ಲ. ಮತ್ತು ಈ ಆಟೋ ರಿಕ್ಷಾವನ್ನು ಬೆಳ್ತಂಗಡಿ ರಿಕ್ಷಾ ಪಾರ್ಕಿನಲ್ಲಿ ನಿಲ್ಲಿಸಲಾಗಿತ್ತು ಅದನ್ನು ಅಲ್ಲಿಂದ ವಶಪಡಿಸಿಕೊಂಡಿರುತ್ತಾರೆಂದರೆ ಸರಿಯಲ್ಲವೆಂದು ಉತ್ತರವನ್ನು ನೀಡಿರುತ್ತಾರೆ.

ಪ್ರಾ.ಸಾ. -1 ಮತ್ತು 2 ಇವರ ಸಾಕ್ಷಿ ಹೇಳಿಕೆಯು ಪೂರಕವಾಗಿದ್ದು ಹಾಗೂ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ: 07.07.2001ರಂದು ಆಟೋ ರಿಕ್ಷಾ ಸಂಖ್ಯೆ: ಕೆಎ-21-2445 ರಲ್ಲಿ 17.280 ಲೀಟರು ಮದ್ಯವನ್ನು ಸಾಗಣೆ ಮಾಡಲಾಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಮೊದಲನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ವಾಹನದ ಮಾಲೀಕರಾದ ರಾಮಣ್ಣ ಗುಡಿಗಾರ್, ಇವರನ್ನು ಡಿಡಬ್ಲ್ಯೂ-1 ಎಂದು ಇವರು ದಿನಾಂಕ: 04.01.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ತಾನು ಆಟೋ ರಿಕ್ಷಾ ಸಂಖ್ಯೆ: ಕೆಎ-21-2445 ರ ನೊಂದಣಿ ಮಾಲೀಕನಾಗಿದ್ದು ತಾನೇ ಚಾಲಕನಾಗಿರುತ್ತಾನೆ. ಸದರಿ ಆಟೋ ರಿಕ್ಷಾವನ್ನು ಬೆಳ್ತಂಗಡಿ ಪಾರ್ಕಿನಲ್ಲಿ ಪಾರ್ಕ್ ಮಾಡಿ ಬಾಡಿಗೆ ಮಾಡಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 07.07.2001 ರಂದು ಬೆಳಿಗ್ಗೆ 10.00 ಗಂಟೆ ಸಮಯಕ್ಕೆ ತನ್ನ ರಿಕ್ಷಾವನ್ನು ಬೆಳ್ತಂಗಡಿ ಪಾರ್ಕಿನಲ್ಲಿ ಪಾರ್ಕ್ ಮಾಡಿದೆ. ಆ ಸಮಯಕ್ಕೆ ಅಬಕಾರಿ ಪೊಲೀಸರು ಮತ್ತು ಅವರೊಂದಿಗೆ ಇಬ್ಬರು ವ್ಯಕ್ತಿಗಳು ಬಂದು ತನ್ನ ಆಟೋವನ್ನು ಠಾಣೆಗೆ ತೆಗೆದುಕೊಂಡು ಹೋಗುವಂತೆ ತಿಳಿಸಿದ್ದರು. ತಾನು ಅವರ ಬಳಿ ಯಾಕೆಂದು ವಿಚಾರಿಸಿದಾಗ ತನ್ನ ಮೇಲೆ ಒಂದು ಫಿರ್ಯಾದು ಇದೆಯೆಂದು ತಿಳಿಸಿರುತ್ತಾರೆ. ತನಗೆ ಸದರಿ ಸ್ಥಳದಲ್ಲಿ ಯಾವುದೇ ಮೆಮೋವನ್ನು ನೀಡಿರುವುದಿಲ್ಲ. ಠಾಣೆಗೆ ಹೋದನಂತರ ಅಬಕಾರಿ ಮಾಲುಗಳನ್ನು ಸಾಗಿಸಿದ್ದ ಬಗ್ಗೆ ಕೇಸು ಇದೆಯೆಂದು ತಿಳಿಸಿರುತ್ತಾರೆ. ತನ್ನ ರಿಕ್ಷಾವನ್ನು ವಶಪಡಿಸಿಕೊಂಡಿರುತ್ತಾರೆ. ಅನಂತರ ನಾನು ತನ್ನ ಮನೆಯವರಿಗೆ ಫೋನು ಮಾಡಿ ಜಾಮೀನಿನ ಮೂಲಕ ಬಿಡುಗಡೆ ಮಾಡಿರುತ್ತಾರೆ. ಆದರೆ ರಿಕ್ಷಾವನ್ನು ಬಿಟ್ಟುಕೊಟ್ಟಿರುವುದಿಲ್ಲ. ಈ ಘಟನೆಯ ಪೂರ್ವದಲ್ಲಿ ಬೆಳ್ತಂಗಡಿ ಎಕ್ಸೈಜ್ ಕಾಂಟ್ರಾಕ್ಟ್ ಹರೀಶ್ ಎಂಬವರಿಗೆ ಸಂಬಂಧಪಟ್ಟ ಸುಮಾರು 4 ಜನ ಬಂದು ತನ್ನಲ್ಲಿ ಪರವಾನಿಗೆ ಇಲ್ಲದ ಅಬಕಾರಿ ಮಾಲುಗಳನ್ನು ಸಾಗಾಟ ಮಾಡಲು ರಿಕ್ಷಾವನ್ನು ತರಲು ತಿಳಿಸಿರುತ್ತಾರೆ. ಇದಕ್ಕೆ ಒಪ್ಪದಿರುವ ಕಾರಣ ಸದರಿ ಹರೀಶ್‌ಗೆ ಸಂಬಂಧಪಟ್ಟ ವ್ಯಕ್ತಿಗಳು ಅಬಕಾರಿ ಪೊಲೀಸರ ಮೇಲೆ ಪ್ರಭಾವ ಬೀರಿ ಸುಳ್ಳು ಕೇಸನ್ನು ದಾಖಲಿಸಿರುತ್ತಾರೆ. ತಾನು ರಿಕ್ಷಾದಿಂದ ಬರುವ ಆದಾಯ ಬಿಟ್ಟರೆ, ಬೇರೆ ಯಾವುದೇ ಜೀವನೋಪಾಯಕ್ಕೆ ಆದಾಯವಿರುವುದಿಲ್ಲ. ತನ್ನ ರಿಕ್ಷಾವನ್ನು ತನಗೆ ಬಿಡುಗಡೆಗೊಳಿಸಬೇಕೆಂದು ವಿನಂತಿಸಿಕೊಂಡಿರುತ್ತಾರೆ. ಈ ಸಾಕ್ಷಿಯನ್ನು ಎಡಿಪಿಯವರು ಪಾಟೀ ಸವಾಲು ಮಾಡಿರುತ್ತಾರೆ. ಈ ಸಾಕ್ಷಿದಾರರ ಹೇಳಿಕೆಯನ್ನು ಪರಿಶೀಲಿಸಲಾಗಿ ಸದರಿ ಮೊಕದ್ದಮೆ ದಾಖಲಿಸಿದ ದಿನಾಂಕದಂದು ಆಟೋ ರಿಕ್ಷಾದಲ್ಲಿ ಯಾವುದು ಮದ್ಯ ಸಾಗಾಣಿಕೆಯಾಗಿಲ್ಲ. ತನ್ನ ಮೇಲೆ ಸುಳ್ಳು ಆಪಾದನೆ ದಾಖಲಿಸಿರುತ್ತಾರೆ ಎಂದು ಉತ್ತರ ನೀಡಿರುತ್ತಾರೆ.

ಈ ಪ್ರಕರಣದ ವಿಚಾರಣೆಯಲ್ಲಿ ಲಭ್ಯವಿದ್ದ ಸಾಕ್ಷಿದಾರರ ಹೇಳಿಕೆ ಮತ್ತು ದಾಖಲಾತಿಗಳನ್ನು ಪರಿಶೀಲಿಸಲಾಗಿ ಅಬಕಾರಿ ಅಧಿಕಾರಿಗಳು ವಾಹನವನ್ನು ವಶಪಡಿಸಿಕೊಂಡ ಸಮಯದಲ್ಲಿ ಫಿರ್ಯಾದುದಾರರು ದಿನಾಂಕ: 07.07.2001ರಂದು ವಾಹನ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ನ್ನು ತಡೆದು ಪರಿಶೀಲಿಸಿದ ಸಂದರ್ಭದಲ್ಲಿ ಸದರಿ ವಾಹನವನ್ನು ಪ್ರಕರಣದ ಆರೋಪಿಯಾಗಿರುವ ಶ್ರೀ ರಾಮಣ್ಣ ಗುಡಿಗಾರರವರೇ ವಾಹನ ಚಲಾಯಿಸುತ್ತಿದ್ದು ಅಕ್ರಮ ಸೊತ್ತುಗಳು ಸದರಿ ವಾಹನದಲ್ಲಿ ಜಪ್ತು ಮಾಡಲಾಗಿದ್ದು ಆರೋಪಿಯು ತನ್ನ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಸುತ್ತಿರುವ ಅಂಶ ಮೇಲ್ನೋಟಕ್ಕೆ ಸಾಬೀತು ಪಡಿಸಬಹುದಾಗಿರುತ್ತದೆ. ಹಾಗೂ ಫಿರ್ಯಾದುದಾರರು ನೀಡಿರುವ ಸಾಕ್ಷಿ ಹೇಳಿಕೆ ಮತ್ತು ಪ್ರಕರಣಕ್ಕೆ ಸಂಬಂಧಿಸಿ ವಶಪಡಿಸಿಕೊಳ್ಳಲಾಗಿರುವ ಮದ್ಯಗಳ ಮಾದರಿಗಳನ್ನು ಪಿಡಬ್ಲ್ಯೂ-1 ರವರಾದ ರತ್ನಾಕರ ಅಬಕಾರಿ ರಕ್ಷಕ ಇವರು ನೀಡಿರುವ ಸಾಕ್ಷಿ ಹೇಳಿಕೆ ಹಾಗೂ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿ ಅವುಗಳು ಮಾದಕ ದ್ರವ್ಯಗಳು ಎಂಬುವುದಾಗಿ ದೃಢಪಡಿಸಿ ರಾಸಾಯನಿಕ ವಿಶ್ಲೇಷಕರು ನೀಡಿರುವ ದಿನಾಂಕ: 30.07.2001ರ ರಾಸಾಯನಿಕ ವಿಶ್ಲೇಷಣೆ ಪರೀಕ್ಷೆ ವರದಿ ಇದನ್ನು ವಿಚಾರಣೆಯ ಸಂದರ್ಭದಲ್ಲಿ ನಿಶಾನೆ ಪಿ-1 ಎಂಬುವುದಾಗಿ ಗುರುತಿಸಲಾಗಿದ್ದು, ಮೇಲಿನ ಎಲ್ಲಾ ಅಂಶಗಳನ್ನು ಈ ಪ್ರಾಧಿಕಾರವು ಕೂಲಂಕುಷವಾಗಿ ಪರಿಗಣಿಸಿ ಆರೋಪಿಯು ದಿನಾಂಕ: 07.07.2001ರಂದು

ಅಪರಾಧ ಸ್ಥಳದಲ್ಲಿ ಅಕ್ರಮವಾಗಿ 17.280 ಲೀಟರು ಪ್ರಮಾಣ ಮದ್ಯವನ್ನು ತಾನು ಸ್ವತಃ ಚಲಾಯಿಸಿ ಸಾಗಿಸುತ್ತಿದ್ದ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445 ರ ವಾಹನದಲ್ಲಿ ಹೊಂದಿರುವುದು ಸ್ಪಷ್ಟವಾಗಿ ಸಾಬೀತು ಆಗಿದೆಯೆಂದು ತೀರ್ಮಾನಕ್ಕೆ ಬರಲಾಗಿದೆ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಪ್ರಾಧಿಕಾರವು ಈ ಕೆಳಗಿನ ತೀರ್ಮಾನಕ್ಕೆ ಬಂದಿರುತ್ತದೆ.

1) ದಿನಾಂಕ: 07.07.2001ರಂದು ವಾಹನ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ರಲ್ಲಿ ಅಕ್ರಮವಾಗಿ 2 ಪೆಟ್ಟಿಗೆಗಳಲ್ಲಿ 17.280 ಲೀಟರು ಮದ್ಯ ಸಾಗಾಣಿಕೆ ಮಾಡಲಾಗಿತ್ತೇ? -ಹೌದು-

2) ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ? -ಇಲ್ಲ-

3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ? -ಹೌದು-

**ಆದೇಶ**

ಶ್ರೀ ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43ಬಿ ನಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಬೆಳ್ತಂಗಡಿ ಉಪವಲಯ ಬೆಳ್ತಂಗಡಿರವರ ಮೊಕದ್ದಮೆ ಸಂಖ್ಯೆ: 1/2001-02 ದಿನಾಂಕ: 07.07.2001ರಲ್ಲಿ ಜಪ್ತುಪಡಿಸಿಕೊಂಡಿರುವ ಬಜಾಜ್ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ನ್ನು ನಿಯಮ 43ಎ (2) ರನ್ವಯ ಈ ಪ್ರಾಧಿಕಾರ ದಿನಾಂಕ: 25.08.2001ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ರದ್ದುಗೊಳಿಸಿ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ವಾಹನ ಮಾಲೀಕರು ಈ ಪ್ರಾಧಿಕಾರದಿಂದ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಹೊಂದಿರುವ ವಾಹನ ಆಟೋ ರಿಕ್ಷಾ ಸಂಖ್ಯೆ: ಕೆಎ-21-2445ನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸುವುದು. ತಪ್ಪಿದಲ್ಲಿ ಸದರಿಯವರು ನೀಡಿರುವ ವಾಹನದ ಮೌಲ್ಯ ರೂ.30,000/- ಬ್ಯಾಂಕ್ ಗ್ಯಾರಂಟಿ ಮೊತ್ತವನ್ನು ವಾಹನದ ಬದಲಿಗೆ ಮೌಲ್ಯವನ್ನಾಗಿ ಪಡೆಯಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 24.11.2004ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.1 - ಶ್ರೀ ರತ್ನಾಕರ ಪಿ, ಅಬಕಾರಿ ರಕ್ಷಕ.

ಪ್ರಾ.ಸಾ.2 - ಶ್ರೀ ಬಿ. ಜಯ, ಅಬಕಾರಿ ಉಪ ನಿರೀಕ್ಷಕರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಕೆಮಿಕಲ್ಸ್ ವರದಿ.

ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿ.

ನಿಶಾನೆ ಪಿ-3 - ಮಹಜರು.

ನಿಶಾನೆ ಪಿ-4 - ವಶಪಡಿಸಿಕೊಂಡ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ವಿನಂತಿಸಿದ ವರದಿ.

**ಅನುಬಂಧ-3**

**ಫಿರ್ಯಾದುದಾರರ ಪರ ಅರ್ಜಿದಾರರು ಮಂಡಿಸಲಾದ ಸೊತ್ತುಗಳು:**

ಡಿಡಬ್ಲ್ಯೂ-1 - ಅರ್ಜಿದಾರರ ಹೇಳಿಕೆ- ಶ್ರೀ ರಾಮಣ್ಣ ಗುಡಿಗಾರ.

**ಅನುಬಂಧ-4**

ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು- ಇಲ್ಲ.

**ಅನುಬಂಧ-5**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು. -ಇಲ್ಲ-

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್. 1701

## ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ಉಪ ವಿಭಾಗ, ಅರಸೀಕೆರೆ

**ಅಧಿಸೂಚನೆ**

**ಸಂಖ್ಯೆ: ಸಕಾಅ:ಸನೀಉವಿ:ಅ.ಕೆರೆ:ಸಿಬ್ಬಂದಿ:2004-05, ದಿನಾಂಕ: 17ನೇ ನವೆಂಬರ್, 2004**

**ವಿಷಯ :** ಸಣ್ಣ ನೀರಾವರಿ ಉಪ ವಿಭಾಗ, ಅರಸೀಕೆರೆ ಕಛೇರಿಯನ್ನು ಕಾರ್ಯಾರಂಭ ಮಾಡಿರುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ:22:ಸೇಸಎ:2004, ಬೆಂಗಳೂರು: ದಿನಾಂಕ: 30.08.2004.
2. ಸರ್ಕಾರದ ಆದೇಶ ಸಂಖ್ಯೆ: ಸನೀಇ:38:ಸೇಸಎ:2004, ಬೆಂಗಳೂರು ದಿನಾಂಕ: 25.10.2004.
3. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರ ಕಛೇರಿ ಪತ್ರದ ಸಂಖ್ಯೆ: ಸಿಎಂಐ:ಇಎಸ್‌ಟಿ-11:ಜಿಒಇ-9:ಟಿಆರ್‌ಎಫ್: 2004-05:2243, ದಿನಾಂಕ: 10.11.2004.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ ಪತ್ರಗಳ ಆದೇಶಗಳನ್ವಯ ಶ್ರೀ ಹೆಚ್.ಸಿ. ಪ್ರಭುದೇವರು, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಆದ ನಾನು ಸಣ್ಣ ನೀರಾವರಿ ಉಪ ವಿಭಾಗ, ಅರಸೀಕೆರೆ ಕಛೇರಿಯ ಪ್ರಭಾರವನ್ನು ದಿನಾಂಕ: 17.11.2004ರ ಪೂರ್ವಾಹ್ನ ವಹಿಸಿಕೊಂಡಿರುತ್ತೇನೆ ಹಾಗೂ ಸದರಿ ಕಛೇರಿಯನ್ನು ಹೊಸದಾಗಿ ಕಾರ್ಯಾರಂಭ ಮಾಡಲಾಗಿದೆ.

ಆದ್ದರಿಂದ ಇನ್ನು ಮುಂದೆ ಈ ಕಛೇರಿಗೆ ಸಂಬಂಧಿಸಿದ ಎಲ್ಲಾ ಸರ್ಕಾರಿ ಮತ್ತು ಅರೆ ಸರ್ಕಾರಿ ಪತ್ರ ವ್ಯವಹಾರಗಳನ್ನು ಈ ಕೆಳಕಂಡ ವಿಳಾಸದೊಂದಿಗೆ ವ್ಯವಹರಿಸಲು ಕೋರಲಾಗಿದೆ.

ವಿಳಾಸ: ಹೆಚ್.ಸಿ. ಪ್ರಭುದೇವರು,
ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ,
ಹಳೇ ತಾಲ್ಲೂಕು ಕಛೇರಿ ಕಟ್ಟಡ, ಬಿ.ಹೆಚ್. ರಸ್ತೆ, ಅರಸೀಕೆರೆ-573103.

**ಹೆಚ್.ಸಿ. ಪ್ರಭುದೇವರು**
ಸಹಾಯಕ ಕಾರ್ಯಪಾಲಕ ಇಂಜಿನಿಯರ್,
ಸಣ್ಣ ನೀರಾವರಿ ಉಪ ವಿಭಾಗ, ಅರಸೀಕೆರೆ.

ಪಿ.ಆರ್. 1702

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560001**

**ಪ್ರಕಟಣೆ**

**ಸಂಖ್ಯೆ: ಕರಾಆ/ ಆಡಳಿತ/ 27/2004, ದಿನಾಂಕ: 30ನೇ ನವೆಂಬರ್, 2004**

**ವಿಷಯ :** ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಬೆಂಗಳೂರು ನಗರ 3ನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಮಹಿಳಾ ಸದಸ್ಯರಾಗಿ, ಪ್ರತಿ ತಿಂಗಳು ರೂ.3000-00 ಗೌರವ ಧನವನ್ನು ಹಾಗೂ ರೂ.300-00 ಪ್ರಯಾಣ ಭತ್ಯೆಯನ್ನು ಪಡೆಯುತ್ತಾ, ನ್ಯಾಯಿಕ ಸ್ವರೂಪದ ಕೆಲಸವನ್ನು ನಿರ್ವಹಿಸಲು ಇಚ್ಛಿಸುವವರು ನಿಗದಿತ ಅರ್ಜಿ ನಮೂನೆಗಳನ್ನು, ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಬೆಂಗಳೂರು ನಗರ 3ನೇ ಅಪರ, ನಂ.8, 6ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-52, ಇಲ್ಲಿಂದ ಉಚಿತವಾಗಿ ಪಡೆದು, ಈ ಮುಂದಿನ ಅರ್ಹತೆಗಳಿದ್ದಲ್ಲಿ ಮಾತ್ರ ಭರ್ತಿ ಮಾಡಿದ ಅರ್ಜಿಗಳನ್ನು, ದಿನಾಂಕ: 31ನೇ ಡಿಸೆಂಬರ್, 2004ರ ಸಂಜೆ 05-00 ಗಂಟೆಯೊಳಗಾಗಿ, ಬೆಂಗಳೂರು ನಗರ 3ನೇ ಅಪರ ಜಿಲ್ಲಾ ವೇದಿಕೆಯಲ್ಲಿ ಸಲ್ಲಿಸುವುದು.

**ಅರ್ಹತೆಗಳು:**

1) ಅರ್ಜಿ ಸಲ್ಲಿಸುವ ದಿನಾಂಕಕ್ಕೆ 35 ವರ್ಷ ವಯಸ್ಸನ್ನು ಮೀರಿರಬೇಕು ಹಾಗೂ 59 ವರ್ಷ ವಯಸ್ಸನ್ನು ಮೀರಿರಬಾರದು.

2) ಅಂಗೀಕೃತ ವಿಶ್ವವಿದ್ಯಾಲಯದ ಯಾವುದಾದರೂ ವಿಷಯದಲ್ಲಿ ಪದವೀಧರರಾಗಿರಬೇಕು.

3) ಅರ್ಜಿ ಸಲ್ಲಿಸುವ ದಿನಾಂಕದಂದಿಗೆ, ನ್ಯಾಯಿಕ ಸ್ವರೂಪದ ಕೆಲಸವನ್ನು ನಿರ್ವಹಿಸುವ ಪ್ರಾಮಾಣಿಕತೆ, ದಕ್ಷತೆ ಹಾಗೂ ಶ್ರದ್ಧೆಯನ್ನು ಹೊಂದಿರುವುದರ ಜೊತೆಗೆ, ಕಾನೂನು ಅಥವಾ ವಾಣಿಜ್ಯ ಅಥವಾ ಅಕೌಂಟ್ಸ್ ಅಥವಾ ಕೈಗಾರಿಕೆ ಅಥವಾ ಸಾರ್ವಜನಿಕ ಆಡಳಿತ ಅಥವಾ ಸಾರ್ವಜನಿಕ ವ್ಯವಹಾರಗಳು ಇವುಗಳಲ್ಲಿ ಕನಿಷ್ಠ 10 ವರ್ಷಗಳ ಅನುಭವವನ್ನು ಹೊಂದಿರುವವರಾಗಿಬೇಕು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ,
ಕರ್ನಾಟಕ ರಾಜ್ಯ ಆಯೋಗ, ಬೆಂಗಳೂರು.

**-------------------------------------ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/**
**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ ಸದಸ್ಯರ ನೇಮಕಾತಿಗೆ ಅರ್ಜಿ**

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ

| | |
|---|---|
| ಅ. | ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ: |
| ಆ. | ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ: |
| ಇ. | ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ: (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ) |

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ........................................................................ (ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರು ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |

| | | |
|---|---|---|
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |
| ಆ. | ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರ ಅಥವಾ ಯಾವುದೇ ವೃತ್ತಿಯಲ್ಲಿದ್ದೀರ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಆ) |
| 4. | **ತಂದೆಯ ಅಥವಾ ಪತಿಯ:** | |
| ಅ. | ಪೂರ್ಣ ಹೆಸರು | (ಅ) |
| ಆ. | ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ.<br>(ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಆ) |
| ಇ. | ವೃತ್ತಿ- ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಇ) |
| 5. | ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ಋಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. ಅ. | ಜನ್ಮ ಸ್ಥಳ, ಜಿಲ್ಲೆ ಮತ್ತು ರಾಜ್ಯ. | (ಅ) |
| ಆ. | ಪ್ರಸ್ತುತ ನೆಲೆಸಿರುವ ಜಿಲ್ಲೆ. | (ಆ) |
| 7. ಅ. | ನಿಮ್ಮ ಮತ | (ಅ) |
| ಆ. | ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ?<br>ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು. | (ಆ) |

8. ಎಸ್.ಎಸ್.ಎಲ್.ಸಿ. ಯಿಂದ ಮೊದಲ್ಗೊಂಡು ವಿದ್ಯಾರ್ಹತೆ- ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ ಕಾಲೇಜಿನ ವಿವರಗಳೊಂದಿಗೆ, (ದೃಢೀಕರಿಸಿದ ಪದವಿ/ ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ ಪದವಿ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರು ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಛೇರಿ/ ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | | | |
|---|---|---|---|
| 10. | ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ, ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | | |
| 11. | ಅ. | ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ? | (ಅ) |
| | ಆ. | ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ? | (ಆ) |
| | ಇ. | ಮೇಲಿನ (ಅ) ಅಥವಾ/ ಮತ್ತು (ಆ) ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಇ) |
| 12. | ಅ. | ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ ತೆಗೆದು ಹಾಕಲಾಗಿದೆಯೇ (removed)/ ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred). | (ಅ) |
| | ಆ. | ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ? | | |
| | 1. | ವಯಸ್ಸನ್ನು ಋಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ. | |
| | 2. | ಹುದ್ದೆಗೆ ಬೇಕಾದ ವಿದ್ಯಾರ್ಹತೆ/ ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/ 16ನ್ನು ನೋಡಿ) | |

| | | |
|---|---|---|
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ- ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ). | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

......................................................................ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ:68/ 1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/ *ರಾಜ್ಯ ಆಯೋಗದ *ಅಧ್ಯಕ್ಷ/ *ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/ *ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/ *ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ..................................................ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/ *ಸದಸ್ಯನಾಗಿ ಕಾರ್ಯ ನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:
ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣಪತ್ರ**

ಶ್ರೀ.......................................ಇವರ ಮಗನಾದ/ ಮಗಳಾದ/ ಹೆಂಡತಿಯಾದ ಶ್ರೀ/ ಶ್ರೀಮತಿ................................. ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ........................ವರ್ಷ ಮತ್ತು....................ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ ಶ್ರೀಮತಿ.......................................(ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ:
ದಿನಾಂಕ:

ಸಹಿ ಮತ್ತು ಹೆಸರು: ಮನೆಯ ಪೂರ್ಣ ವಿಳಾಸ
ಮತ್ತು ಕಛೇರಿ/ ವೃತ್ತಿಯ ಪೂರ್ಣ ವಿಳಾಸ ಹಾಗೂ
ಮನೆಯ ಮತ್ತು ಕಛೇರಿಯ ದೂರವಾಣಿ ಸಂಖ್ಯೆ:

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ,
ಕರ್ನಾಟಕ ರಾಜ್ಯ ಆಯೋಗ, ಬೆಂಗಳೂರು.

ಪಿ.ಆರ್. 1703

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್-ಸಿಆರ್/22/2004, ದಿನಾಂಕ: 26ನೇ ನವೆಂಬರ್, 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಹೆಚ್. ಸಕ್ಕರ್‌ಸಾಬ್ | | 1) ಎಸ್. ನೂರ್‌ಸಾಬ್, |
| 2. ಅಮಿನಾಬಿ ಬಿ. | | ಲಾರಿ ಮಾಲೀಕರು, ಬಳ್ಳಾರಿ. |
| ಮೇಟಿಕುರ್ಕೆ ವಾಸ: | | 2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., |
| | | ಚಿತ್ರದುರ್ಗ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀ/ ಶ್ರೀಮತಿ (1) ಸಕ್ಕರ್‌ಸಾಬ್ (2) ಅಮಿನಾಬಿ ಇವರು, ತಾವು ಮೃತ ಎಸ್. ಶಬ್ಬೀರ್ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎಸ್. ಶಬ್ಬೀರ್ ಇವರು ಒಂದನೇ ಪ್ರತಿವಾದಿಗಳಾದ ಎಸ್. ನೂರ್ ಭಾಷ ಇವರಲ್ಲಿ ಲೋಡರ್ ಅನ್ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 1704

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣ ಸಂಖ್ಯೆ: ಕಾಅದಾ:ಕಾನಪ:ಸಿಆರ್-326:2004, ದಿನಾಂಕ: 3ನೇ ಡಿಸೆಂಬರ್, 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ತಿಪ್ಪಣ್ಣ ಬಿನ್ ಲೇಟ್ ಪಕೀರಪ್ಪ | | 1) ಡಿ. ಹಾಲಪ್ಪ ಬಿನ್ ರುದ್ರಪ್ಪ, |
| 50 ವರ್ಷಗಳು, | | ಹಿರೇಹಡಗಲಿ ಪೋಸ್ಟ್, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಕನಾಟಕ |
| ಹರಿಹರ ಟೌನ್, ಪಿಎನ್‌ಟಿ ಆಫೀಸ್ ಹತ್ತಿರ | | ಸ್ಟೇಟ್ ಟ್ರ್ಯಾಕ್ಟರ್ ಮಾಲೀಕರು, ನಂ.ಕೆಎ-35:875-875 |
| ಹರಿಹರ. | | 2) ದಿ ಮೇನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., |
| | | ಟಿವಿಎಸ್ ಷೋ ರೂಮ್, ಮೇನ್ ರೋಡ್, ಬಳ್ಳಾರಿ. |

**ಪ್ರಕಟಣೆ**

ಶ್ರೀ/ ಶ್ರೀಮತಿ ತಿಪ್ಪಣ್ಣ ಬಿನ್ ಲೇಟ್ ಪಕೀರಪ್ಪ ಇವರುಗಳಾದ ತಾವು ಮೃತ ತುಂಗಮ್ಮ ಇವರ ಗಂಡ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತುಂಗಮ್ಮ ರವರು ಒಂದನೇ ಪ್ರತಿವಾದಿಗಳಾದ ಡಿ. ಹಾಲಪ್ಪ ಬಿನ್ ರುದ್ರಪ್ಪ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ (ಹಮಾಲಿ) ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1705

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಾವಣಗೆರೆ ಜಿಲ್ಲೆ, ದಾವಣಗೆರೆ.

**IN THE COURT OF THE COMMISSIONER FOR WORKMEN'S COMPENSATION, BIDAR**

**PROCLAMATION**

**No.LOB/WCA/Cr-58/2004**

| **Applicants:** | **V/s** | **Respondents:** |
|---|---|---|
| Surekha, W/o Late Narsingrao, Age:50 Yrs. | | 1. Managing Director |
| Occ. Household, R/o. | | Nandi Cylender Pvt. Ltd., |
| Rao Taleem District: Bidar. | | 2. Naubad District-Bidar. |

Smt. Surekha M/o. Dhanraj, R/o Rao Jaleem District Bidar have/has filed application in this court claiming compensation stating that Late: Dhanraj was working as Security Guard Under the Respondent No.I he met with an accident arising out of and during the course of employment as a result he died on 30-05-2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

COMMISSIONER FOR WORKMEN'S COMPENSATION, BIDAR.

PR-1706

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ಸಂಖ್ಯೆ: ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್/ 15/ 2003-04:1361, ದಿನಾಂಕ: 30ನೇ ನವೆಂಬರ್, 2004**

**ವಿಷಯ :** ಸಮಾಪನಾ ಆದೇಶಿತ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಅರೆಹಳ್ಳಿ, ತೀರ್ಥಹಳ್ಳಿ ತಾ: ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್ 15/ 2003-04/ ದಿನಾಂಕ: 19.05.2004.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ಪತ್ರ ನಂ.ಎಆರ್-24/ ಸಮಾಪನೆ/ ರದ್ಧತಿ/ ಸಿಆರ್78/ 2004-05, ದಿನಾಂಕ: 26.11.2004.

ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಅರೆಹಳ್ಳಿ, ತೀರ್ಥಹಳ್ಳಿ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.286664/2000-01/ ದಿನಾಂಕ: 30.11.2000ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಸಹಕಾರ ಅಭಿವೃದ್ಧಿ ಅಧಿಕಾರಿ ತೀರ್ಥಹಳ್ಳಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 27.05.2004 ರಂದು ಪ್ರಭಾರ ವಹಿಸಿಕೊಂಡು ಸದಸ್ಯರ ಷೇರು ಹಣವನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 25.10.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ ಈ ಸಂಘದ ಅಸ್ಥಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ ಸಿಎಲ್‌ಎಂ/ 2000/ ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಅರೆಹಳ್ಳಿ, ತೀರ್ಥಹಳ್ಳಿ ತಾಲ್ಲೂಕು ಇದರ ನೊಂದಣಿ ನಂ.28664/2000-2001/ ದಿನಾಂಕ: 30.11.2000 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30ನೇ ನವೆಂಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1707

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ಸಂಖ್ಯೆ: ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್/ 50/ 2003-04:1351, ದಿನಾಂಕ: 30ನೇ ನವೆಂಬರ್, 2004**

**ವಿಷಯ :** ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಹುರಳಿ, ಸೊರಬ ತಾಲ್ಲೂಕು ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್ 50/ 2003-04/ ದಿನಾಂಕ: 30.03.2004.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ.ಎಆರ್-25/ ಸಮಾಪನೆ/ ರದ್ಧತಿ/ ಸಿಆರ್-3665/ 2004-05, ದಿನಾಂಕ: 30.11.2004.

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಹುರುಳಿ, ಸೊರಬ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೊಂದಣಿ ಸಂಖ್ಯೆ: 25431/ 98-99/ ದಿನಾಂಕ: 16.03.1999ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರ್ಗಾಧಿಕಾರಿ, ಶಿವಮೊಗ್ಗ ಹಾಲು ಒಕ್ಕೂಟ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:10.04.2004 ರಂದು ಪ್ರಭಾರ ವಹಿಸಿಕೊಂಡು ಸದಸ್ಯರ ಷೇರು ಹಣವನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 12.11.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ (2)ರ ಪತ್ರದಲ್ಲಿ ನೊಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ ಈ ಸಂಘದ ಅಸ್ಥಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ ಸಿಎಲ್‌ಎಂ/ 2000/ ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಹುರಳಿ, ಸೊರಬ ತಾಲ್ಲೂಕು ಇದರ ನೊಂದಣಿ ನಂ.25431/98-99/ ದಿನಾಂಕ: 16.03.1999 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30ನೇ ನವೆಂಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1708

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ**

**ಸಂಖ್ಯೆ: ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್/ 18/ 2003-04:1355, ದಿನಾಂಕ: 30ನೇ ನವೆಂಬರ್, 2004**

**ವಿಷಯ :** ಸಹ್ಯಾದ್ರಿ ವನೌಷಧ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶ ನಂ. ಡಿಆರ್‌ಎಸ್/ ಸಮಾಪನೆ/ ಡಿಎಲ್‌ಎಸ್ 18/ 2003-04/ ದಿನಾಂಕ: 31.05.2004.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ.ಎಆರ್-24/ ಸಮಾಪನೆ/ ರದ್ದತಿ/ ಸಿಆರ್-84/ 2004-05, ದಿನಾಂಕ: 23.11.2004.

ಸಹ್ಯಾದ್ರಿ ವನೌಷಧ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ಸಂಖ್ಯೆ: 26275/98-99/ ದಿನಾಂಕ: 31.03.1999ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ 1ನೇ ವೃತ್ತ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 02.05.2004ರಂದು ಪ್ರಭಾರ ವಹಿಸಿಕೊಂಡು ಸದಸ್ಯರ ಷೇರು ಹಣವನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಪಾಲು ಏನೂ ಇರುವುದಿಲ್ಲವೆಂದು ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ: 16.11.2004ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಸರ್ಕಾರದ ವಿನಿಯೋಗಗಳು ಇಲ್ಲದ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ ಈ ಸಂಘದ ಅಸ್ಥಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ ಸಿಎಲ್‌ಎಂ/ 2000/ ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಹ್ಯಾದ್ರಿ ವನೌಷಧ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ನಂ.26275/98-99/ ದಿನಾಂಕ: 31.03.1999 ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 30ನೇ ನವೆಂಬರ್ 2004 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1709

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಸಂಖ್ಯೆ: ಎಆರ್/31/ ಇಪಿ/ 98/ 2004-05, ದಿನಾಂಕ: 29ನೇ ನವೆಂಬರ್, 2004**

**ವಿಷಯ :** ದಿ ದಾವಣಗೆರೆ ಅರ್ಬನ್ ಕೋ-ಆಪ್. ಬ್ಯಾಂಕ್ ಲಿ., ದಾವಣಗೆರೆ ಇವರಿಂದ ಸಾಲ ಪಡೆದು ಸುಸ್ತಿಯಾಗಿರುವ ಶ್ರೀ ಹನುಮಂತಪ್ಪ ಬಿನ್ ಹನುಮಂತಪ್ಪ ಮನೆ ನಂ.600, ಎ1-2, ಆನೆಕೊಂಡ, ದಾವಣಗೆರೆ ಇವರ ಸ್ಥಿರಾಸ್ತಿಯ ಮಾರಾಟ ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ :**
1. ಮಾರಾಟಾಧಿಕಾರಿಯವರ ಪತ್ರ ಸಂಖ್ಯೆ: ಯುಸಿಬಿ/ ಎಸ್‌ಓ/07/2004-05, ದಿನಾಂಕ: 24.09.2004.
2. ಈ ಕಛೇರಿಯ ಸಮ ಸಂಖ್ಯೆಯ ಪತ್ರದ ದಿನಾಂಕ: 27.10.2004.

